

ತನು ನಿನ್ನದು ಜೀವ ನಿನ್ನದೋ ‖ ಪ ‖

ಅನುದಿನದಲಿ ಬಾಹೊ ಸುಖ ದುಃಖ ನಿನ್ನದಯ್ಯ ‖ ಅ. ಪ ‖

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದೋ
ನವ ಮೋಹನಾಂಗೇರ ಕಣ್ಣಿಂದ ರೂಪವ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ

ಒಡಗೂಡಿ ಗಂಧ ಪರಿಮಳ ಕಸ್ತೂರಿಗಳ 1
ಬಿಡದೆ ಲೇಪಿಸಿ ಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ತೃಪ್ತಿ ನಿನ್ನದಯ್ಯ 2

ಮಾಯಾ ಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೆಂದ್ರಿಯಗಳು ನಿನ್ನವೋ
ಕಾಯಜ ಜನಕ ಒಡೆಯ ಆದಿ ಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೇ 3

—ಶ್ರೀ ಕನಕದಾಸರು.



ಸಂಪುಟ ೧೪] ನವಂಬರ್ ೧೯೮೬ [ಸಂಚಿಕೆ ೬

# ವಿಷಯಸೂಚಿ



ಮುಖಚಿತ್ರ : ದೀಪಾವಳಿ–ಚಿತ್ರ – ಮ. ಶ್ರೀ

ಹಿಂಬದಿಯಲ್ಲಿ : ಬ್ರಹ್ಮೋತ್ಸವದಲ್ಲಿ ರಾತ್ರಿಯ ನೋಟ.

ಒಳಗಡೆ : ಬ್ರಹ್ಮೋತ್ಸವದಲ್ಲಿ ಸ್ವಾಮಿಸೇವೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್, ತಿ. ತಿ. ದೇ ಹೊಸ ಬೋರ್ಡ್ ಪ್ರಮಾಣ ವಚನ ಸ್ವೀಕಾರ.


ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಕೆ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

# ಸಂಪಾದಕೀಯ

ಭಾರತೀಯರಲ್ಲಿ ಹಬ್ಬ ಹರಿದಿನಗಳು ವಿಶೇಷ. ಪ್ರತಿಹಬ್ಬವೂ ಪ್ರತ್ಯೇಕ ವೈಶಿಷ್ಟ್ಯದಿಂದ ಕೂಡಿದ್ದು ಪ್ರತ್ಯೇಕ ಪರಿಣಾಮ ರಮಣೀಯತೆಯನ್ನು ಹೊಂದಿರುತ್ತವೆ. ಸನಾತನಧರ್ಮದ ಪರಿಕಲ್ಪನೆ, ಆಚಾರ, ಅಂತಃಸತ್ತ್ವಗಳ ದೃಷ್ಟಿಯಿಂದ ಗಮನಾರ್ಹವಾದವು. ಸಂಕ್ರಾಂತಿಯೆಂದರೆ ಹಸೆ, ಹರಿದಾಸರು, ಅಳಿಯಂದಿರು ಉಗಾದಿಯೆಂದರೆ ಉಡುಪು, ಪಂಚಾಂಗಶ್ರವಣ, ಗಣೇಶನೆಂದರೆ ಮೃಣ್ಮೂರ್ತಿ, ಪರ್ಣಪೂಜೆ; ದಸರೆಯೆಂದರೆ ನವರಾತ್ರಿ ಪೂಜೆ ಬಾಲಕರು ಬಂದು ಹರಸುವ ಹಾಡು, ರಾಮಲೀಲೆ. ಬನ್ನಿಪೂಜೆ. ದೀಪಾವಳಿ ದೀಪಗಳ ಲಾಸ್ಯ, ಅಳಿಯಂದಿರ ಆಗಮನ, ಮಕ್ಕಳ ಸಂಭ್ರಮ, ಅಪ್ಪನ ಜೇಬಿನ ದುಡ್ಡುಗಳೆಲ್ಲ ಪಟಪಟ ಹಾರುವಿಕೆ–ಇತ್ಯಾದಿಯಾಗಿ ಗುರುತಿಸುತ್ತ ಹೋಗಬಹುದು. ಎಲ್ಲವರ ಅಂತರ್ಯದಲ್ಲಿ ತನಗಿರುವುದರಲ್ಲಿ ಇತರರಿಗೂ ಹಂಚಿಕೊಟ್ಟು ಸಮಾಜರೂಪಿ ಸರ್ವೋತ್ತಮನನ್ನು ಆರಾಧಿಸಿ ಆತ್ಮತೃಪ್ತಿಯನ್ನು ಹೊಂದುವುದಿದೆ.

ಇಲ್ಲಿ ದಸರೆ, ದೀಪಾವಳಿಗಳು ಬೇರೊಂದು ಕಾರಣದಿಂದ ವಿಶೇಷವಾಗುತ್ತವೆ. ಇವು ಪ್ರಧಾನವಾಗಿ ವೀರ ಪೂಜೆ. ಸ್ತ್ರೀ ಶಕ್ತಿಯ ಆರಾಧನೆ. ಉನ್ನತಿಕೆಯನ್ನು ಸೂಚಿಸುವ ಹಬ್ಬಗಳು. ದಸರೆಯಲ್ಲಿ ಮಹಿಷಾಸುರ ಮರ್ದಿನಿಯೆಂದು ದುರ್ಗೆಯನ್ನು ಆರಾಧಿಸಿ ಅಜ್ಞಾನ ಮಹಿಷಸಂಹಾರ ವರವನ್ನು ಬೇಡಿದರೆ, ದೀಪಾವಳಿಯಲ್ಲಿ ನರಕಸದೃಶತೆಯನ್ನು ಸಂಹರಿಸಲು ಸತ್ಯಭಾಮಾಸಂಕರ್ಷಣ ಶಕ್ತಿಯನ್ನು ಆಹ್ವಾನಿಸುತ್ತೇವೆ.

ಆದರೆ ಇಪ್ಪತ್ತೊಂದನೆಯ ಶತಮಾನದತ್ತ ಧಾವಿಸುತ್ತಿರುವ ನಾವು ಆಚಾರಗಳ ಹೊರ ಪ್ರಕಾಶಕ್ಕೆ ಮರುಳಾಗಿ ಹಬ್ಬಗಳ ಅಂತಃ ಸತ್ತ್ವವನ್ನು ಮರೆತಿದ್ದೇವೆ. ಆಯುಧಗಳನ್ನೇನೋ ಬಳಸುತ್ತಲೇ ಇದ್ದೇವೆ, ಆದರೆ ವಿರುದ್ಧ ಕಾರಣಗಳಿಗಾಗಿ. ಸಮಾಜ ಶಕ್ತಿಯ ವಿಜೃಂಭಣೆಗೆ, ಸಂಹಾರ ಸಾಮರ್ಥ್ಯಕ್ಕೆ, ಒಂದೊಮ್ಮೆ ಸಮಾಜ ವಿರೋಧೀ ಮಹಿಷ ನರಕರು ಸಿಕ್ಕಿ ಬಿದ್ದು, ಶಾಂತಿಯನ್ನು ಸ್ಥಾಪಿಸಲು ಪೂರಕವಾದ ಬಾಹುಬಲ ಬುದ್ಧಿ ಶಕ್ತಿಗಳನ್ನು ಇಂದು ಸತ್ತ್ವವನ್ನು, ಸೌಧರ್ಮವನ್ನು ನಾಶಗೊಳಿಸಲು ಬಳಸಲಾಗುತ್ತಿದೆ. ಹಬ್ಬಗಳ ಸಂಕೇತಗಳನ್ನು ಮರೆತು ನಿಜಜೀವನದಲ್ಲಿ ಆತತಾಯಿತನ ಆರಾಧಿತವಾಗುತ್ತಿದೆ. ಒಂದೊಮ್ಮೆ ಯುಗಕ್ಕೆ ಒಬ್ಬ ರಾವಣ ಮಹಿಷ ನರಕರು – ಗಳುಂಟಾಗಿದ್ದರಿಂದ ಅವರನ್ನು ಗೆದ್ದವರನ್ನು ನಾಡೀಜನ ಸಂರಕ್ಷಕರೆಂದು, ಶಾಂತಿ ಸೌಧರ್ಮಗಳ ಸ್ಥಾಪಕರೆಂದು ಕೊಂಡಾಡಿ ಆರಾಧಿಸುತ್ತಿರುವ ನಮ್ಮ ಮಧ್ಯದಲ್ಲೇ ರಾವಣ, ನರಕ ಮಹಿಷರುಗಳು ಅಸಂಖ್ಯರಾಗಿ, ನಾರಿಯ ವರದನಾದ ವರನೇ ನರಕನಾಗಿ, ಮಾವ ಮಾರಕನಾಗಿ, ಅಹಂಕಾರ ಮಹಿಷವಾಗಿ ಬೆಂಬತ್ತುತ್ತಿದೆ ನಾವು ಹೆಚ್ಚಿನ ಜ್ಞಾನಿಗಳೆಂಬುದರ ಬಗ್ಗೆ ಸಂದೇಹ ಮೂಡುವಂತೆ ಆಗುತ್ತಿದೆ.

ಹಬ್ಬವೆಂದರೆ ಹೊಸಭಕ್ಷ್ಯಗಳು ಮಾತ್ರವೇ ಅಲ್ಲ; ಹೊಸ ಅರ್ಥದ ಅಗತ್ಯವೂ ಇದೆ. ಆಚರಣೆಯಲ್ಲಿ ರಾಷ್ಟ್ರ ಜೀವನದ ಬಗ್ಗೆ ಕಾಳಜಿಯಿರಬೇಕು. ಇಲ್ಲದಿದ್ದಲ್ಲಿ ಯಾವುದೋ ಲೋಕದಲ್ಲಿರುವ ಮಹಿಷ ನರಕರು ತಾವೇ ಇಂದಿನವರಿಗಿಂತ ಮೇಲೆನ್ನುವ ಅಪಾಯವಿದೆ. ಹಾಗಾಬಾರದು

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ

**ವಾರ್ತಾಲಹರಿ**

# ತಿರುಮಲೆಯಲ್ಲಿ ನಡೆದ ವೈಭವದ ಬ್ರಹ್ಮೋತ್ಸವಗಳು



ನಿತ್ಯಕಲ್ಯಾಣ ಪಚ್ಚತೋರಣಗಳ, ನಿತ್ಯವೂ ಉತ್ಸವದ, ತಿರುಮಲೆಯಲ್ಲಿ ಈ ಬಾರಿಯ ವಾರ್ಷಿಕ ಬ್ರಹ್ಮೋತ್ಸವಗಳು ಎಂದಿಗಿಂತ ಹೆಚ್ಚು ಜನವನ್ನು ಆಕರ್ಷಿಸಿ ಬ್ರಹ್ಮೋತ್ಸವದ ಹತ್ತು ದಿನಗಳ ಕಾಲವೂ ಇದೇ ಕಲಿಯುಗ ವೈಕುಂಠವೆಂಬುದನ್ನು ಅವಧಾರಿಸುವಂತೆ ಶೋಭಾಯಮಾನವಾಗಿ ಅತಿ ಸಡಗರದಿಂದಲೂ, ಅತಿ ಭಕ್ತಿಯಿಂದಲೂ ಯಶಸ್ವಿಯಾದವು

ಬ್ರಹ್ಮೋತ್ಸವ ಸಂದರ್ಭದಲ್ಲಿ ಹೆಚ್ಚುವ ಯಾತ್ರಿಕ ಸಂದಣಿಗೆ ತಕ್ಕಂತೆ ಹೆಚ್ಚಿನ ಅನುಕೂಲಗಳ ಏರ್ಪಾಡು ಮಾಡಲು ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಪರ್ಯವೇಕ್ಷಣೆಯಲ್ಲಿ ತಿ ತಿ.ದೇ. ಕಾರ್ಯಕರ್ತರು, ಸ್ವಯಂಸೇವಕರು, ಹೋಂ–ಗಾರ್ಡ್‌ಗಳು ಶ್ರಮ ಕೈಗೊಂಡಿದ್ದರು. ತಿರುಮಲೆಯಲ್ಲಿನ ಶಾಂತಿ ಭದ್ರತೆಗಳನ್ನು ರಕ್ಷಿಸಲು ಹೆಚ್ಚಿಗೆ 450 ಮಂದಿಯ ಸಿವಿಲ್ ರಿಸರ್ವ್ ಪೋಲೀಸರನ್ನು ಕರೆಯಿಸಿ, ಎರಡು ಹೊಸ ಪೋಲೀಸು ಕೇಂದ್ರಗಳನ್ನು ಸ್ಥಾಪಿಸಲಾಗಿದ್ದಿತು. ಯಾತ್ರಿಕರಿಗೆ ಸೂಚನೆಗಳನ್ನು ನೀಡಲು ಸ್ವಯಂ ಸೇವಕರನ್ನೂ ಹೋಂಗಾರ್ಡ್‌ಗಳನ್ನೂ ನಿಯಮಿಸಲಾಗಿದ್ದಿತು. ತಿರುಮಲೆಯ ಪರಿಶುಭ್ರತೆಗೆ ಹೆಚ್ಚಿನ ಆರೋಗ್ಯಾಧಿಕಾರಿಗಳನ್ನೂ, ಅತ್ಯವಸರ ಚಿಕಿತ್ಸೆಗಳಿಗಾಗಿ ಹೆಚ್ಚಿನ ವೈದ್ಯರನ್ನೂ ಕರೆಯಿಸಲಾಗಿದ್ದಿತು. ತಿರುಪತಿಯಿಂದ ದಿನವೂ ಹೋಗಿಬರುವ 127 ಬಸ್‌ಗಳ ಜೊತೆಗೆ ಹೆಚ್ಚಿನ 25 ಬಸ್‌ಗಳನ್ನೂ ಏರ್ಪಾಡು ಮಾಡಲಾಗಿದ್ದಿತು. ಹಲವಾರು ರೀತಿಯ ಆಧ್ಯಾತ್ಮಿಕ ಕಾರ್ಯಕ್ರಮಗಳಿಂದ ಕೂಡಿದ ತಿರುಮಲೆಯನ್ನು ಬ್ರಹ್ಮೋತ್ಸವಗಳ ಸಮಯದಲ್ಲಿ ಮತ್ತೂ ಶೋಭಾಯಮಾನವಾಗಿ ಮಾಡಲು ವಿವಿಧ ವಿಭಾಗಗಳು ಅಹರ್ನಿಶಿ ಕೆಲಸ ಮಾಡಿದವು. ಆಲಯದ ಬಳಿಯ ವಿವಿಧ ಪ್ರಾಂತಗಳನ್ನು ವರ್ಣಮಯ ವಿದ್ಯುದ್ದೀಪಗಳಿಂದಲೂ ಹಲವು ರೀತಿಯ ಹೂವಿನ ಅಲಂಕಾರಗಳಿಂದಲೂ ಸುಂದರಗೊಳಿಸಿದ್ದರು

ಬ್ರಹ್ಮೋತ್ಸವದ ಅಷ್ಟೂ ದಿನಗಳಲ್ಲಿ ಆಲಯದ ಎದುರಿನ ಶ್ರೀ ವೆಂಕಟೇಶ್ವರ ಆರ್ಷ ಸಂಸ್ಕೃತಿ ಸದಸ್‌ನಲ್ಲಿ ಬೆಳಗ್ಗಿನಿಂದ ಸಂಜೆಯವರೆಗೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಪ್ರತಿ ದಿನ ಬೆಳಗ್ಗೆ 6 ಗಂಟೆಗೆ ಶ್ರೀ ಮುದಿವರ್ತಿ ಕೊಂಡಮಾಚಾರ್ಯರ ಗೀತಾಪಾರಾಯಣದಿಂದ ಆರಂಭವಾದ ಕಾರ್ಯಕ್ರಮಗಳು ಭಜನೆಯಲ್ಲೂ, ಧಾರ್ಮಿಕೋಪನ್ಯಾಸಗಳಲ್ಲೂ, ಅನ್ನಮಾ–ಚಾರ್ಯ ಸಂಕೀರ್ತನೆಗಳಲ್ಲೂ, ವಿವಿಧ ಹರಿಕಥೆಗಳಲ್ಲೂ ಮುಂದುವರೆದು ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಗಳ ಪುರಾಣ ಪ್ರವಚನದ ನಂತರದ ಪ್ರತ್ಯೇಕ ಸಂಗೀತ ಕಾರ್ಯಕ್ರಮಗಳಲ್ಲಿ ಹರಿದು ರಾತ್ರಿ 9 ಗಂಟೆಗೆ ಕೊನೆಗೊಳ್ಳುತ್ತಿದ್ದವು. ಹಿಂದೂ ಧರ್ಮ ರಕ್ಷಣ ಸಂಸ್ಥೆಯ ವತಿಯಿಂದ ನಡೆದ ಈ ಕಾರ್ಯಕ್ರಮಗಳಲ್ಲಿ ಅದರ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಶ್ರೀಮತಿ ಡಿ. ರಾಜಲಕ್ಷ್ಮಿ, ಶ್ರೀ ಮೇಡಸಾನಿ ಮೋಹನ್, ಶ್ರೀ ಎಸ್. ರಾಜನ್ನಕವಿ, ಶ್ರೀ ಡಿ ರಾಮಮೂರ್ತಿ ಮುಂತಾದವರ ಉಪನ್ಯಾಸಗಳೂ, ಅನ್ನಮಾ–ಚಾರ್ಯ ಪ್ರಾಜೆಕ್ಟ್, ಎಸ್. ವಿ. ಸಂಗೀತ ನೃತ್ಯ ಕಲಾಶಾಲೆಗಳ ಸಂಗೀತ ಕಾರ್ಯಕ್ರಮಗಳೂ, ಆಂಧ್ರಪ್ರದೇಶದ ವಿಖ್ಯಾತ ಹರಿಕಥಾಕಲಾಕಾರರಿಂದ ಹರಿಕಥೆಗಳೂ, ಶ್ರೀ ಈಮನಿ ಶಂಕರಶಾಸ್ತ್ರಿ, ಶ್ರೀ ಸಂಧ್ಯಾವಂದನಂ ಶ್ರೀನಿವಾಸರಾವ್, ಶ್ರೀ ಶ್ರೀ ಲಾಲ್‌ಗುಡಿ ಜಯರಾಮನ್, ಶ್ರೀ ಓಲೇಟಿ ವೆಂಕಟೇಶ್ವರ್ಲು, ಶ್ರೀ ಶ್ರೀಪಾದ ಪಿನಾಕಪಾಣಿ, ಶ್ರೀ ಎಂ. ಎಸ್. ಬಾಲಸುಬ್ರಹ್ಮಣ್ಯಶರ್ಮ, ಶ್ರೀ ಡಿ. ಪಶುಪತಿ, ಶ್ರೀ ಜಿ. ಬಾಲಕೃಷ್ಣಪ್ರಸಾದ್, ಶ್ರೀ ಜಿ. ನಾಗೇಶ್ವರರಾವ್, ಶ್ರೀ ಪಿ. ಎಸ್. ರಂಗನಾಥ್, ಶ್ರೀ ಪಾಲಘಾಟ್ ನಾರಾಯಣಸ್ವಾಮಿ, ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಸ್ವಾಮೀಜೀ ಅವರುಗಳ ವಿಶೇಷ ಸಂಗೀತ ಕಾರ್ಯಕ್ರಮಗಳೂ ಇದ್ದವು. ದಿನವೂ ಸಂಜೆ (ಮೊದಲು ಹಾಗೂ ಕಡೆಯ ದಿನದ ವಿನಃ) ದೇವಾಲಯದ ದಕ್ಷಿಣಭಾಗದ ಉಯ್ಯಾಲೆ ಮಂಟಪದಲ್ಲಿ ಸ್ವಾಮಿಯ ಊಂಜಲ್‌ಸೇವೆ ಏರ್ಪಾಡಾಗಿದ್ದಿತು.

ಈ ಎಲ್ಲ ಕಾರ್ಯಕ್ರಮಗಳೂ, ಸ್ವಾಮಿಯ ಉತ್ಸವಗಳೂ ಕ್ಲೋಸ್ಡ್ ಸರ್ಕ್ಯೂಟ್ ಟಿ ವಿ ಯ ಮೂಲಕ ಅಸಂಖ್ಯ ಜನರಿದ್ದ ವೈಕುಂಠ ಕ್ಯೂ ಕಾಂಪ್ಲೆಕ್ಸ್‌ನಲ್ಲೂ ದೇವಾಲಯದ ಇತರ ಪ್ರಮುಖ ಸ್ಥಳಗಳಲ್ಲೂ ಎಲ್ಲರೂ ನೋಡಿ ಆನಂದ ಪಡಲು ಅನುಕೂಲವಾಗುವಂತೆ ಪ್ರಸಾರಮಾಡಲಾಗಿದ್ದಿತು.

8 ನೇ ತಾರೀಖು ಬುಧವಾರದಂದು ನಡೆದ ಗರುಡ ವಾಹನದಂದು ಆಂಧ್ರಪ್ರದೇಶದ

(38 ನೇ ಪುಟ ನೋಡಿ)



ಧಾರ್ಮಿಕೋಪನ್ಯಾಸಗಳಲ್ಲಿ ಶ್ರೀ ಮೇಡಸಾನಿ ಮೋಹನ್ ಹಾಗೂ ಶ್ರೀ ರಾಜನ್ನಕವಿ. ಮಧ್ಯದಲ್ಲಿ ಪುರಾಣಪ್ರವಚನದಲ್ಲಿ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ,

# ಕನಕದಾಸರ ಕೃತಿಗಳಲ್ಲಿ ಸೇವಾಭಾವ

ಸ್ವಾತಂತ್ರ್ಯ, ಸಮಾನತೆಗಳು ನಿತ್ಯ ಮಂತ್ರಗಳಾಗಿರುವ ಪ್ರಚಲಿತ ಪ್ರಜಾಪ್ರಭುತ್ವದ ಯುಗದಲ್ಲಿ 'ದಾಸತ್ವ'ವು ಒಂದು ಜೀವನ ಮೌಲ್ಯವಾಗಿರಬಲ್ಲುದೇ ? ಇದ್ದರೂ, ಅಂತಹ ಮೌಲ್ಯವು ಸಮಕಾಲೀನವಾಗಿರುವುದು ಶಕ್ಯವೇ ? ಒಬ್ಬನು ದಾಸರು ತಮ್ಮ ಕೀರ್ತನೆಗಳಲ್ಲಿ ಬೋಧಿಸಿದಂತಹ 'ದಾಸತ್ವ'ವನ್ನು ಒಪ್ಪಿಕೊಂಡು – ಅನುಸರಿಸುತ್ತ, ಆಧುನಿಕ ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಸ್ವತಂತ್ರನಾಗರಿಕನಾಗಿ ಮುನ್ನಡೆಯುವುದು ಸಾಧ್ಯವೇ ? ದಾಸರು ತಾವೇ ಕೀರ್ತನೆಗಳಲ್ಲಿ ಹೇಳಿದ ಎಲ್ಲ ವಿಚಾರಗಳೂ ಸಾರ್ವಕಾಲೀನವೇ? ಇಂತಹ ಪ್ರಶ್ನೆಗಳು ಇಂದಿನ ಸಂಸಾರದಲ್ಲಿ ಸಹಜ, ಸ್ವಾಭಾವಿಕ.

ಆದರೆ, ಕನ್ನಡ ಸಾಹಿತ್ಯದಲ್ಲಿ ಮಿಂಚಿ ಹೋದ ದಾಸರ ಕೀರ್ತನೆಗಳು – ಅವುಗಳಲ್ಲಿಯೂ ಮುಖ್ಯವಾಗಿ ಕನಕದಾಸರ ಕೀರ್ತನೆಗಳು ಬೋಧಿಸುವ 'ದಾಸತ್ವ'ವು ಪ್ರಸ್ತುತ ರಾಷ್ಟ್ರದ ಕಲ್ಪನೆಗಾಗಲೀ, ನಾಗರಿಕತೆಯ ತತ್ತ್ವಗಳಿಗಾಗಲೀ ವಿರುದ್ಧವಾದದ್ದಲ್ಲ, ಪೂರಕವಾದದ್ದು – ಎನ್ನುವುದನ್ನು ಶ್ರುತಪಡಿಸುವುದೇ ಪ್ರಕೃತ ಲೇಖನದ ಉದ್ದೇಶವಾಗಿದೆ.

## ಯಾರು ದಾಸ?
## ಯಾವುದರ ದಾಸ?

'ದಾಸ' ಎಂದೊಡನೆ ನಮ್ಮ ಕಣ್ಣು ಮುಂದೆ ಬಂದು ನಿಲ್ಲುವ ಚಿತ್ರಗಳು ಎರಡು. ಒಂದನೆಯದು, ಇಂದು ವೃತ್ತಿಪರರಾಗಿ – ಕೀರ್ತನೆಯ ಕಾರ್ಯವನ್ನು ನಡೆಸುತ್ತಿರುವ ಹರಿದಾಸರ ಚಿತ್ರ. ಎರಡನೆಯದು ಇಂದಿಗೆ ನಾಲ್ಕುನೂರು ವರ್ಷಗಳ ಹಿಂದೆ ಬಾಳಿಹೋದ ಪುರಂದರದಾಸ, ಕನಕದಾಸ ಮೊದಲಾದವರ ವ್ಯಕ್ತಿತ್ವದ ಚಿತ್ರ. ಈ ಎರಡೂ ಚಿತ್ರಗಳಲ್ಲಿ ಬಹುಮಟ್ಟಿಗೆ ಸಾಮಾನ್ಯವಾಗಿ ಕಾಣುವುದು ದಾಸರ ಬಹಿರಂಗ ವೇಷ.

ತಲೆಗೊಂದು ರುಮಾಲು ಬಿಗಿದು, ಮೈಗೆಲ್ಲ ನಾಮಗಳನ್ನು ಬಳಿದುಕೊಂಡು – ಕೊರಳಲ್ಲಿ ಹಾರ, ಕೈಯಲ್ಲಿ ತಾಳ ಹಿಡಿದು – 'ಭಜನೆ' ಹಾಡುತ್ತ–ಕಥೆ ಹೇಳಿ – ಜನರರಂಜನೆ ಮಾಡಿ– ತಮ್ಮ ಜೀವನ ನಡೆಸುತ್ತ – ಹರಿಕೀರ್ತನ ಕಲೋಪಜೀವಿಗಳನ್ನು ಗಮನಿಸಿ, ನಮಗೆ ಇಂತಹ ದಾಸತ್ವ ಬೇಡ ಅಥವಾ ಸಾಧ್ಯವಿಲ್ಲ – ಎಂದು ಬಹುಮಂದಿ ಭಾವಿಸಿಕೊಂಡರೆ ತಪ್ಪೇನೂ ಇಲ್ಲ.

ಡಾ॥ ಹೊಸಬೆಟ್ಟು
ಸೀತಾರಾಮಾಚಾರ್ಯ

ಕನಕದಾಸರೂ – ಕೇವಲ ದಾಸವೇಷಧಾರಿಗಳಾಗಿ – ಹೊಟ್ಟೆಹೊರೆಯುವವರನ್ನು ಕಂಡು ಗೇಲಿ ಮಾಡಿದ್ದುಂಟು:–

ದಾಸ ಪಟ್ಟವೋ ಸನ್ಯಾಸಿಪಟ್ಟವೋ ॥ ಪ ॥
ಆಸೆಯಿಂದ ನೆಲೆಯಾದಿ ಕೇಶವನ್ನ ನೆನೆಯದವಗೆ ॥ ಅ. ಪ. ॥
ಮಂಡೆ ಬೋಳುಮಾಡಿ ನಾವು
ಉಂಡೆಯನ್ನು ಬರೆದು ಕೆಡಿಸಿ
ಕಂಡ ಕಂಡವರ ಕೂಡಿ–
ಭಂಡ ಜನ್ಮ ಹೊರೆಯುವವಗೆ ॥ ೧ ॥
ಅವರಿವರ ಕೈಯ ನೋಡಿ ಹ
ಲವು ಕೆಲವು ಮಾತನಾಡಿ
ಹಲವು ಹಂಬಲಿಸಿ ದಿನವ
ಕಳೆದು ಉಳಿದು ಬಾಳುವವಗೆ ॥ ೨ ॥
ಬೆಂದ ಸಂಸಾರನೆಂಬೊ
ಬಂಧನದೊಳಗೆ ಸಿಲುಕಿ
ಕೊಂಡಾಡದೆ ಕೇಶವನ್ನ
ಒಂದು ಬಾರಿ ನೆನೆಯದವಗೆ ॥ ೩ ॥

(ರಾಗ: ಕಲ್ಯಾಣಿ – ಅಟ್ಟತಾಳ)

ಕನಕದಾಸರೇ ನೀಡಿದ 'ಹರಿದಾಸ'ನ ಆದರ್ಶ ಹೀಗಿದೆ.

ದಾಸನಾಗಬೇಕು ಸದಾ ಹರಿಯ ದಾಸನಾಗಬೇಕು ॥ ಪ ॥

ದಾಸನಾಗಬೇಕು ಕ್ಲೇಶ ಪಂಚಕವಳಿದು
ಆಸೆಯಲ್ಲಿ ಮನ ಸೂಸದೆ ಸರ್ವದಾ–
ಇನಿತು ಈ ಜಗವೆಲ್ಲ ಈಶ್ವರನ ಮಯವೆಂದು
ಘನವಾಪ ಮೋಹದ ಗತಿಯನ್ನು ದಾಂಟುತ್ತ ॥ ೧ ॥

ತನುವು ಅಸ್ಥಿರವೆನ್ನುತ ತಿಳಿದು ಶ್ರೀಧರನ ಹೃದಯದಿ ಕಾಣುತ
ಘನವಾದ ಇಂದ್ರಜಾಲದ ಮಹಿಮೆಯೆನ್ನುತಾ
ಬಿನುಗು ಸಂಸಾರದ ಮಮತೆಯನು ಬಿಡುತ ॥ ೨ ॥

ಆರು ಚಕ್ರದಿ ಮೆರೆವ ಅಖಂಡನ
ಮೂರು ಗುಣವ ತಿಳಿದು
ಆರು ಮೂರು ಹದಿನಾರು ತತ್ತ್ವವ ಮಾಡಿ
ತೋರುವ ಕಾಗಿನೆಲೆಯಾದಿ ಕೇಶವನಡಿ ॥ ೩ ॥

ಹೀಗಾಗಿ–ಕನಕದಾಸರ ದಾಸತ್ವ ಒಂದು ಆದರ್ಶ ಜೀವನ ವಿಭಾಗ. ಅದು ಒಂದು ವೇಷಕ್ಕಾಗಲೀ, ಜೀವನ ವೃತ್ತಿಗಾಗಲೀ ಮಾತ್ರ ಸಂಬಂಧಪಟ್ಟದ್ದಲ್ಲ.

‘ದಾಸ’ ಎನ್ನುವುದು ರೂಢಿಯ ‘ಗುಲಾಮ’, ‘ಅಸ್ವತಂತ್ರ’, ‘ಕೂಲಿ’, ‘ಅಡಿಯಾಳು’– ಎಂಬ ಅರ್ಥಕ್ಕೆ ಸೀಮಿತವಾದದ್ದಲ್ಲ. ‘ಈಶ’ ತತ್ತ್ವದ ನಿಷ್ಠಾವಂತ ಅನುಯಾಯಿಯಾಗುವುದರಿಂದ ಅನುಭವಿಸಬಹುದಾದ ಒಂದು ಧನ್ಯತೆಯ ಸ್ಥಿತಿ– ಎಂಬ ಉದಾತ್ತ ಅರ್ಥವನ್ನು ಅದು ಧ್ವನಿಸುತ್ತದೆ.

ಈ ಜಗತ್ತಿನ ಕ್ಷಣಿಕ ಆಮಿಷಗಳಿಗೆ ಬಲಿಯಾಗಿ ಲೋಕದ ದಾಸನಾಗುವುದಕ್ಕಿಂತ – ಈ ಎಲ್ಲಾ ಸಿರಿ–ಸಂಪತ್ತುಗಳ ಮೂಲಶಕ್ತಿಯಾದ ‘ಲಕ್ಷ್ಮೀಪತಿ’ಯ ದಾಸನಾಗುವುದೇ ಲೇಸು – ಎನ್ನುತ್ತದೆ ಹರಿದಾಸ ಸಾಹಿತ್ಯ. ವ್ಯಕ್ತಿ ತನ್ನ ಸನ್ನಿವೇಶ–ಪರಿಮಾಣಗಳ ಅಡಿಯಾಳಾಗುವುದಕ್ಕಿಂತ ಶಾಶ್ವತವಾದ ಒಂದು ತತ್ತ್ವದ ದಾಸನಾಗಿರುವುದು ಮೇಲು – ಎನ್ನುವುದೇ ದಾಸ ಸಂದೇಶ. ತಮ್ಮ ಹೆಸರು ‘ಕನಕದಾಸ’ ಎಂದಿದ್ದರೂ–ಅವರು–ಕನಕದ ದಾಸರಾಗಿರಲಿಲ್ಲ– ಕಾಗಿನೆಲೆಯಾದಿ ಕೇಶವನ ಕಿಂಕರರಾಗಿದ್ದರು– ಎನ್ನುವುದೂ ಸ್ಮರಣಾರ್ಹ.

## ಅನುಸರಿಸಿದ ಭಕ್ತಿಮಾರ್ಗ

ಅನಂತವಾದ ಭಗವತ್ ತತ್ತ್ವಕ್ಕೂ–ಮಾನವ ವ್ಯಕ್ತಿಗೂ ಇರುವ ಸಂಬಂಧವೇ ಭಕ್ತಿ. ಈ ತತ್ತ್ವಪ್ರೀತಿಯೇ ದಾಸತ್ವದ ಪ್ರಮುಖ ಲಕ್ಷಣ. ಭಕ್ತಿಯ ನಿಚ್ಚಣಿಕೆ ಹಂತಗಳಿಂದ – ಮೆಟ್ಟಿಲುಗಳಿಂದ ಕೂಡಿದೆ. ಅವುಗಳನ್ನು ಒಂದೊಂದಾಗಿ ಏರಬೇಕು– ಅವು – ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನೆ, ವಂದನ, ಧ್ಯಾನ, ಸಖ್ಯ ಮತ್ತು ಆತ್ಮನಿವೇದನ. ಇವಲ್ಲದೆ– ಪಂಚವಿಧ ಭಾವಗಳೆಂದು ನಿರೂಪಿತವಾಗಿರುವ ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳನ್ನು ಇಲ್ಲಿ ಉಲ್ಲೇಖಿಸಬೇಕು. ಎರಡನೆಯ ವರ್ಗೀಕರಣವು ಭಕ್ತನಿಗೂ ಭಗವಂತನಿಗೂ ಇರುವ ಬಾಂಧವ್ಯವನ್ನು ಪ್ರತಿಪಾದಿಸುವುದರಲ್ಲಿ ಹೆಚ್ಚು ಅನುಭವಗಮ್ಯವೂ, ಹೃದಯಸ್ಪರ್ಶಿಯೂ ಆಗಿರುವಂತೆ ತೋರುತ್ತದೆ. ನವವಿಧ ಭಕ್ತಿಗಳಲ್ಲಿ ಕೊನೆಯದಾದ ‘ಆತ್ಮನಿವೇದನ’ದ ಹಂತವನ್ನು ದಾಟಿದ ಮೇಲೆಯೇ ನಿಜವಾದ – ‘ಭಕ್ತಿ’ – ಪ್ರಾರಂಭವಾಗುತ್ತದೆ – ಒಂಭತ್ತು ವಿವಿಧ ಸಾಧನೆಯ ನೆಲೆಗಳೇ – ಅವುಗಳನ್ನು ಏರುತ್ತ ತುದಿ ಮುಟ್ಟಿದ ಮೇಲೆಯೇ ಸಾಧಕನಿಗೆ ಆ ದಿವ್ಯಾನುಭವ ಪೂರ್ಣಪ್ರಮಾಣದಲ್ಲಿ ಲಭ್ಯವಾದೀತು

ಅಂತೂ ವ್ಯಕ್ತಿಗಳ ಭಿನ್ನತೆಗಳನ್ನು ಗಮನಿಸಿ ಅವರವರ ಇತಿ–ಮಿತಿಗಳಿಗನುಸಾರವಾಗಿ ವಿವಿಧ ನೆಲೆಗಳ ತನಕ ಈ ತತ್ತ್ವಾನುಸಂಧಾನದ ಭಕ್ತಿಮಾರ್ಗವನ್ನೇ ಎಲ್ಲರೂ ನಡೆಸಬಹುದು.

ನಾನು-ನನ್ನದು ಎಂಬ ಮದ ಅಳಿಯಬೇಕು. ‘ಅಹಂ’ ಹೋಗಿ ‘ದಾಸೋಹಂ’ ಸ್ಥಿತಿ ತಲುಪಬೇಕು- ಆದರೆ ‘ಹೇಳಿಕೆ’ಯಲ್ಲಿ ಬಹಳ ಸುಲಭ ಎನಿಸುವ ಈ ಮಾರ್ಗ ಆಚರಣೆಯಲ್ಲಿ ಹಲವು ಆತಂಕಗಳಿಂದ ತುಂಬಿದೆ. ಆ ಆತಂಕಗಳನ್ನು ಗೆಲ್ಲುವ ಉಪಾಯದ ಪಥ್ಯವನ್ನು ದಾಸರು ಸೂಚಿಸಿದ್ದಾರೆ.



## ದಾಸಮಾರ್ಗ ಜೀವನ ವಿಮುಖಿಯೇ?

ವಿದ್ಯಾರ್ಥಿಯಾದವನು ಹೊರಗಿನ ಆಕರ್ಷಣೆ- ಕ್ಷಣಿಕ ರಂಜನೆಗಳಿಗೆ ಮರುಳಾಗದೆ- ವಶನಾಗದೆ ತನ್ನ ಅಧ್ಯಯನವನ್ನು ನಿಷ್ಠೆಯಿಂದ ಮಾಡಿದರೆ ಮಾತ್ರ ತನ್ನ ಪರಮ ಧ್ಯೇಯಸಾಧನೆಯಲ್ಲಿ ಸಫಲನಾಗಬಲ್ಲ. ಈ ನಿಷ್ಠೆ - ನಿಷೇಧಾತ್ಮಕವಾದದ್ದಲ್ಲ. ಜೀವನ ವಿಮುಖಿಯಾದದ್ದಲ್ಲ. ಹಾಗೆಯೇ ಉದಾತ್ತ ಜೀವನದತ್ತ ಮುಖಮಾಡಿಕೊಂಡಿರುವುದರಿಂದಲೇ ದಾಸತ್ವವು ಕ್ಷಣಿಕ ಸುಖ-ಕಾಮನೆಗಳ ಜೀವನಪ್ರವೃತ್ತಿಗಳಿಗೆ ವಿಮುಖವಾಗಿ ತೋರುವುದು. ರೋಗನಿವಾರಣೆಗೆ, ಆರೋಗ್ಯವರ್ಧನೆಗೆ ಕೆಲವು ನಿಷಿದ್ಧ ಪದಾರ್ಥಗಳನ್ನ ವರ್ಜಿಸುವುದು ಅಗತ್ಯ. ಅದು ಅನಿವಾರ್ಯ ಪಥ್ಯ. ನಾಲಿಗೆಯ ರುಚಿಗೆ ಕಟ್ಟುಬಿದ್ದು ಅಪಥ್ಯ ಮಾಡಿಕೊಂಡರೆ ರೋಗ ನಿವಾರಣೆಯಾಗಲೀ, ಆರೋಗ್ಯಲಾಭವಾಗಲೀ ಅಶಕ್ಯವಾಗಿ ರೋಗಿಯಾಗಿರುವುದೇ ಅಂತಹವನ ಸ್ಥಿತಿ

ದಾಸರು–ಎಂದೂ ‘ಸಂಸಾರ’ಕ್ಕೆ ವಿರೋಧಿಗಳಲ್ಲ. ಹೆಂಡತಿ ಮಕ್ಕಳನ್ನು ಬಿಟ್ಟು ಕಾಡಿಗೆ ನಡೆಯಿರಿ–ಸನ್ಯಾಸ ಸ್ವೀಕರಿಸಿ ಎಂದು ಹೇಳಿದವರಲ್ಲ. ಇದ್ದ–ಜೀವನವೃತ್ತಿಯನ್ನು ತ್ಯಜಿಸಿಬಂದು ಭಜನೆ – ಕೀರ್ತನೆಗಳಲ್ಲಿ ಮೈಮರೆಯಲಿ ಎನ್ನುವುದೂ ಅವರ ಸಂದೇಶವಲ್ಲ. ಎಲ್ಲರೂ ಪುರಂದರ–ಕನಕರಂತೆ ತಾಳ–ತಂಬೂರಿ ಹಿಡಿದು– ಹಾಡುತ್ತ–ನಲಿಯುತ್ತ–ಹರಿಕೀರ್ತನೆ ನಡೆಸುತ್ತಿರಬೇಕೆನ್ನುವುದೂ ಅವರ ಅಪೇಕ್ಷೆಯಲ್ಲ.

(33ನೇ ಪುಟ ನೋಡಿ)

# ಕನಕದಾಸರು

ಸುಮಾರು ಸಾವಿರ ವರ್ಷಕ್ಕೂ ಹೆಚ್ಚಿನ ಚರಿತ್ರೆಯನ್ನು ಹೊಂದಿರುವ ಕನ್ನಡ ಸಾಹಿತ್ಯ ವಿಶಾಲವೂ ಅಗಾಧವೂ ಆಗಿದೆ. ನಾಡಿನರಾಜಕೀಯ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಬದಲಾವಣೆಗಳೊಂದಿಗೆ ಸಾಹಿತ್ಯವೂ ಒಡನಾಡಿಯಾಗಿ ಏರಿಳಿತಗಳನ್ನು ಕಾಣುತ್ತ ಬಂದಿದೆ. ತನ್ನ ಹಿರಿಮೆ ಗರಿಮೆಗಳಿಂದ ಒಮ್ಮೊಮ್ಮೆ ಜಗತ್ತನ್ನೇ ಬೆರಗುಗೊಳಿಸಿದೆ, ತನ್ನತ್ತ ಆಕರ್ಷಿಸಿದೆ. ೧೦ ನೇ ಶತಮಾನದ ಸುಮಾರಿಗೆ ಆಗಿ ಹೋದ ಪಂಪ, ರನ್ನ, ಪೊನ್ನ ಮುಂತಾದ ಉದ್ದಾಮ ಕವಿಗಳು ಚಂಪೂಶೈಲಿಯಿಂದ ಕನ್ನಡಸಾಹಿತ್ಯ ಭಂಡಾರವನ್ನು ತುಂಬಿದರೆ, 12 ನೇ ಶತಮಾನದ ಅಚೆ – ಈಚೆ ಬದುಕಿಬಾಳಿದ ಬಸವಣ್ಣ, ಅಕ್ಕ ಮಹಾದೇವಿಯರಂತಹ ಶಿವಶರಣ, ಶರಣೆಯರು 'ವಚನಗಳು' ಎಂಬ, ಇಡೀ ಸಾಹಿತ್ಯ ಲೋಕಕ್ಕೇ ವಿಶಿಷ್ಟವಾದ ಸಾಹಿತ್ಯ ರಚಿಸಿ, ಕನ್ನಡ ಸಾಹಿತ್ಯ ಲೋಕ ಬೆಳಗಿದರು. ನಂತರ 15 ನೇ ಶತಮಾನದಲ್ಲಿ 'ದಾಸಪಂಥ' ಉದಯಿಸಿ, ವ್ಯಾಸರಾಯರಿಂದ ಪ್ರಜ್ವಲಿಸಿ, ಅವರ ಶಿಷ್ಯ ಪರಂಪರೆಯಿಂದ ರಚಿತವಾದ ಕೀರ್ತನೆಗಳೆಂಬ ಅನುಭವ ಯುಕ್ತ ಪದ್ಯಗಳಿಂದ ಕನ್ನಡಸಾಹಿತ್ಯವನ್ನು ಸಂಪದ್ಭರಿತಗೊಳಿಸಿತು. ಈರೀತಿ ದಾಸಪಂಥದಿಂದ ರಚಿತವಾದ ಸಾಹಿತ್ಯಕ್ಕೆ 'ದಾಸಸಾಹಿತ್ಯ' ಎಂಬ ಪ್ರತ್ಯೇಕ ಹೆಸರಿನಿಂದಲೇ ಕನ್ನಡಸಾಹಿತ್ಯಾಭ್ಯಾಸಿಗಳು ಅಭ್ಯಸಿಸಬೇಕಾದಷ್ಟು ಸತ್ತ್ವ, ಬೆಲೆ ಇದಕ್ಕಿದೆ. ಇಂಥ ದಾಸಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಕೃತಿಗಳನ್ನು ನೀಡಿ, ಅದರ ಹೆಗ್ಗಳಿಕೆಯನ್ನು ಹೆಚ್ಚಿಸುವುದರಲ್ಲಿ ಕನಕದಾಸರ ಪಾಲು ದೊಡ್ಡದೆನ್ನಬಹುದು. ಅವರ ಕಾವ್ಯಗಳು ಚಿಕ್ಕವಾಗಿದ್ದು, ಜನರ ಪ್ರೀತಿ ಮೆಚ್ಚುಗೆಗಳಿಗೆ ಪಾತ್ರವಾಗಿವೆ; ಅವರ ಎಷ್ಟೋ ಪದ್ಯಗಳು ಇಂದು ಜನರ ನಾಲಿಗೆಯ ಮೇಲೆ ಕುಣಿದಾಡುತ್ತಿರುವುದೇ ಇದಕ್ಕೆ ನಿದರ್ಶನ. "ಅವನ ಕಾವ್ಯ ದರ್ಶನ ಬಹು ಜನರಿಗೆ ದರ್ಪಣವಾಗಿ ದಾರಿ ತೋರುತ್ತಿರುವುದು". ಎಂದ ಮೇಲೆ ಅವರ ಬಗೆಗೆ ಹೆಚ್ಚಿನ ವ್ಯಾಖ್ಯಾನ ಬೇಕಿಲ್ಲವೆನಿಸುತ್ತದೆ.

ಕನಕದಾಸರ ಮೊದಲಿನ ಹೆಸರು 'ತಿಮ್ಮಣ್ಣ' ಎಂದು. ಧಾರವಾಡ ಜಿಲ್ಲೆಯ 'ಬಾಡ' ಗ್ರಾಮದಲ್ಲಿ ಕುರುಬರ ಜಾತಿಯಲ್ಲಿ ಬೀರಪ್ಪ ಬಚ್ಚಮ್ಮನವರ ಮಗನಾಗಿ ಜನಿಸಿದರು. ತಂದೆ ವಿಜಯನಗರದ ಪಾಳೆಯಗಾರನಾಗಿದ್ದ. ಆ ಪಾಳೆಯಗಾರಿಕೆ ಇವನಿಗೂ ದೊರೆಯಿತು. ಈ ತಿಮ್ಮಪ್ಪ ತಿಮ್ಮಪ್ಪ ನಾಯಕನಾದ. ತಿಮ್ಮಪ್ಪನಾಯಕ 'ಕನಕದಾಸ'ರಾದ ಕತೆ, ಆಚ್ಚರಿಯದು. ಆದರೆ ಅಷ್ಟೇ ಸತ್ಯವಾದುದು. ಒಂದುದಿನ ತಿಮ್ಮಪ್ಪ ನೆಲವನ್ನು ಅಗೆಯುತ್ತಿದ್ದಾಗ ಅಪಾರಧನರಾಶಿ ದೊರೆಯಿತಂತೆ. ಅಂದಿನಿಂದ ಅವನನ್ನು ಜನರು 'ಕನಕ'ನೆಂದು ಕರೆಯತೊಡಗಿದರಂತೆ. ತಂದೆಯ ಪಾಳೆಯಗಾರಿಕೆ ದೊರೆತಮೇಲೆ ತನ್ನ ಶೌರ್ಯ ಪರಾಕ್ರಮಗಳನ್ನು ತೋರಿ 'ಕನಕನಾಯಕ'ನಾದನು. ಈ ಪ್ರಸಂಗಕುರಿತು ಕನಕದಾಸರೇ ಒಂದು ಪದ್ಯದಲ್ಲಿ "ಪರಬಲವ ನೋಡಿದರೆ ಉರದುರಿದು ಬೀಳುವ ಮನ। ಸೆರೆಹಾಕಿ ನಿಲಿಸಿದೆಯೋ ಹರಿಯೇ ! ಕನಕದಳದಲಿ ಬಂದು ಕಲೆತನೆಂದರೆ ಪೌಜು। ಕನಕು ಮನಕಾಗುವುದು ಹರಿಯೇ!" ಎಂದಿದ್ದಾರೆ. ಪರಾಕ್ರಮಿಯಾದ ಕನಕನಾಯಕ ಕನಕದಾಸನಾದುದು ದೈವ ಪ್ರೇರಣೆಯಿಂದ. ಯುದ್ಧದಲ್ಲಿ ಎಂದೂ ಸೋಲನ್ನರಿಯದ ನಾಯಕ ಒಮ್ಮೆ ಎದುರಾಳಿಯಿಂದ ಬಿದ್ದುಬಿಟ್ಟನು. ಅವನ ಕಡೆಯವರು ದಿಕ್ಕಾಪಾಲಾಗಿ ಓಡಿದರು. ತನಗಾದ ನೋವನ್ನು ತಾಳಲಾರದೆ ಮೂರ್ಛೆ ಹೋದಾಗ ಕನಸಿನಲ್ಲಿ ದೇವರು ಬಂದು "ನನ್ನ ದಾಸನಾಗುವಿಯಾ ಕನಕ ?" ಎಂದು ಕೇಳಿದನಂತೆ "ಎಲ್ಲ ಯಾದರೂ ಉಂಟೇ ? ಅರಸನಾಗಬಲ್ಲವನು ನಾನು ಆಳಾಗುವುದೇತಕ್ಕೆ" ಎಂದು ಉತ್ತರಿಸಿದನಂತೆ. ಒಡನೆಯೇ ಎಚ್ಚರವಾಯಿತು. ಈವರೆಗೆ ಮಾಯವಾದ ನೋವು ಎಚ್ಚರಗೊಳ್ಳುತ್ತಲೇ ಮತ್ತೆ ತಲೆದೋರಿತು. ವ್ಯಥೆಯನ್ನು ತಾಳಲಾರದೆ ಕನಕ ನಾಯಕ 'ನಿನ್ನ ದಾಸನಾಗುತ್ತೇನೆ, ಈ ನೋವು ಅಳಿಸು' ಎಂದು ಅಂಗಲಾಚಿದನಂತೆ. ಈ ಸಂಕಲ್ಪ ಮಾಡುವುದೊಂದೇ ತಡ, ಮೈಮೇಲಿನ ಗಾಯಗಳೆಲ್ಲ ಅಳಿದು ನೋವು ಮಾಯವಾಯಿತಂತೆ. ಬೆಳಕು ಮೂಡಿದಾಗ ಕನಕನಾಯಕ ಬದಲಾಗಿದ್ದ. ಇದನ್ನು ಕುರಿತು ಅವರೇ ಒಂದೆಡೆ ಈರೀತಿ ಹೇಳಿದ್ದಾರೆ "ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ ನರಮಾತ್ರನಾದವನೆನದೆ ಹರಿಯೇ" ಎಂದು.

ಈ ರೀತಿ ದೇವರೊಲುಮೆಯಿಂದ ಪರಮಾರ್ಥ ಮಾರ್ಗಕ್ಕಿಳಿದ ಕನಕನಾಯಕನಿಗೆ ಮೊದಲು ಗುರುವಾಗಿ ದೊರೆತವರು ವಿಜಯನಗರದ ರಾಜಗುರುಗಳಾಗಿ ಶ್ರೀವೈಷ್ಣವ ಸಂಪ್ರದಾಯ ಪ್ರಚಾರ ಪಡಿಸುತ್ತಿದ್ದ ಶ್ರೀ ತಿರುಮಲೆ ತಾತಾಚಾರ್ಯರು. ಕನಕನಿಗೆ ವಿಧ್ಯುಕ್ತವಾಗಿ ಶ್ರೀವೈಷ್ಣವದೀಕ್ಷೆಯನ್ನು ಕೊಟ್ಟು, ನಂತರ ರಾಮಾನುಜಾಚಾರ್ಯರ ಸಿದ್ಧಾಂತದ ರಹಸ್ಯಗಳನ್ನೆಲ್ಲ ತಿಳಿಸಿ ಹೇಳಿದರು. ಈ ದೀಕ್ಷೆಯನ್ನು ಪಡೆದ ನಂತರ ಕನಕನಾಯಕನು 'ಕನಕದಾಸ'ರಾದರು. ತಮ್ಮ 'ಮೋಹನ ತರಂಗಿಣಿ' ಎಂಬ ಕೃತಿಯಲ್ಲಿ ಅವರು ಸಾಂಪ್ರದಾಯದ ಪರಮಾಚಾರ್ಯರಾದ ಶ್ರೀರಾಮಾನುಜಾಚಾರ್ಯರನ್ನು ಕುರಿತು 'ಶ್ರೀಮದ್ಗುರುರಾಯ ದುರಿತ ವಿಜೇಯ ದುಷ್ಕಾಮ ವಿಚ್ಛೇದನಾಹ್ಲಾದ ತಾಮಸಗುಣ ನಾಶ ಸಾತ್ತ್ವಿಕಗುಣ್ಲಾಸ ಶ್ರೀರಾಮಾನುಜ ಮುನಿ ಶರಣು' ಎಂದಿದ್ದಾರೆ. ಅಲ್ಲದೆ ತಾತಾಚಾರ್ಯರನ್ನು ಕುರಿತು "ಈರೀತಿ ಪೆಂಪುವಡೆದ ಸದ್ಗುರು ಕರವಾರಿಜೋದ್ಭವಶಿಷ್ಯ ಜನರ ಪೇರಿಸಿ ನಾಲ್ಬಗೆ ಫಲವೀವ ತಾತಾಚಾರಿಯವರಡಿಗೆರಗುವೆನು" ಎಂದು ಹಾಡಿ ಹೊಗಳಿದ್ದಾರೆ.

ಕನಕದಾಸರ ಧಾರ್ಮಿಕ ಪ್ರವೃತ್ತಿ ಬೆಳೆದು ಅರಳಿದ್ದು ವ್ಯಾಸತೀರ್ಥರ ಸಂಪರ್ಕದಿಂದ. ವ್ಯಾಸರ ಭೇಟಿಯಾದಾಗ ನಡೆಯಿತೆನ್ನುವ ಘಟನೆ ತುಂಬ ಸ್ವಾರಸ್ಯಪೂರ್ಣವಾಗಿದೆ. ವ್ಯಾಸರಾಯರ ಬಳಿ ಹೋಗಿ ಮಂತ್ರೋಪದೇಶ ಮಾಡಲು ಕೇಳಿಕೊಂಡಾಗ ಅವರು ಕುರುಬನಿಗೆ ಎಂಥ ಮಂತ್ರ, ಕೋಣ ಮಂತ್ರ ಎಂದರಂತೆ. ಕನಕ ಗುರುವಾಕ್ಯವನ್ನು ನಂಬಿ, ಅದೇ ಮಂತ್ರವೆಂದು ತಿಳಿದು ಒಂದು ಬಂಡೆಗಲ್ಲಿನೆದುರಿಗೆ 'ಕೋಣ ಕೋಣ' ಎಂದು ಜಪಿಸಿದರು. ಆಗ ಯಮಧರ್ಮನ ಕೋಣ ಪ್ರತ್ಯಕ್ಷವಾಯಿತಂತೆ. ಅದನ್ನು ಗುರುಗಳ ಬಳಿಗೆ ತಂದಾಗ ಕನಕನ ದಿವ್ಯ ಅಗಾಧ ತಪಶ್ಶಕ್ತಿಗೆ ಮೆಚ್ಚಿ ವ್ಯಾಸರು ಅವನನ್ನು ಆಶೀರ್ವದಿಸಿದರಂತೆ. ತಾವು ಕಟ್ಟಿಸುತ್ತಿದ್ದ ಕೆರೆಗೆ ಅಡ್ಡವಾಗಿದ್ದ ಬಂಡೆಗಲ್ಲನ್ನು ಆ ಕೋಣದಿಂದಲೇ ಸರಿಸಿದರಂತೆ. ವ್ಯಾಸಸಮುದ್ರದಲ್ಲಿರುವ 'ಕೋಣನ ತೂಬು' ಅದರ ಸ್ಮಾರಕವಂತೆ. ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದ ಕನಕರ ಸತ್ವವನ್ನು ಉಳಿದ ಶಿಷ್ಯರಿಗೆ ತೋರಿಸಿಕೊಡಲು ಒಂದು ದಿನ ವ್ಯಾಸರು ತಮ್ಮೆಲ್ಲ ಶಿಷ್ಯರಿಗೂ ಒಂದೊಂದು ಬಾಳೆ ಹಣ್ಣು ಕೊಟ್ಟು "ಯಾರೂ ಇಲ್ಲದ ಸ್ಥಳದಲ್ಲಿ ಈ ಹಣ್ಣು ತಿಂದು ಬನ್ನಿ" ಎಂದರಂತೆ. ಶಿಷ್ಯರೆಲ್ಲ ಯಾರೂ ಇಲ್ಲದ ನಿರ್ಜನ ಪ್ರದೇಶದಲ್ಲಿ ಹಣ್ಣನ್ನು ತಿಂದು ಬಂದರೆ ಕನಕ ಮಾತ್ರ ಹಣ್ಣನ್ನು ಹಿಡಿದು ಹಾಗೆಯೇ

ಶ್ರೀ ಗುರುನಾಥ ಇನಾಮದಾರ

ಶ್ರೀ ಶಾರದಾದೇವೀ
ಜೀವನಗಂಗಾ

ಪುಟಗಳು-500 (ಎರಡನೆಯ ಮುದ್ರಣ)

ಪ್ರಕಾಶಕರು :

**ಶ್ರೀ ರಾಮಕೃಷ್ಣ ಆಶ್ರಮ**

**ಬೆಂಗಳೂರು-೫೬೦೦೧೯.**

ಪರಮಮಂಗಳೆಯಾದ ಶ್ರೀ ಶಾರದಾದೇವಿಯು ಕಾರುಣ್ಯದ ಮಾತೆ. ಸಾಕ್ಷಾತ್ ಜನ್ಮದಾತೆಯೇ ಎಂದು ಅವತಾರ ಪುರುಷರಾದ ಶ್ರೀರಾಮಕೃಷ್ಣರು ದೃಢೀಕರಿಸಿದ್ದಾರೆ. ಲೋಕ ಪಾವನೆಯಾಗಿರುವ ಶ್ರೀ ಶಾರದಾದೇವಿಯವರ ನೆನಪು ಮನಸ್ಸನ್ನು ಪವಿತ್ರವನ್ನಾಗಿ ಮಾಡಿ, ಪರಮಾತ್ಮನ ಅನಂತ ವಾತ್ಸಲ್ಯದ ಅನುಭವಕ್ಕೆ ಪಾತ್ರರಾಗುವಂತೆ ಮಾಡುವುದು. ಅವರ ಜೀವನ ಮತ್ತು ಉಪದೇಶಗಳನ್ನು ಒಳಗೊಂಡ "ಶ್ರೀ ಶಾರದಾದೇವೀ ಜೀವನಗಂಗಾ" ಬೃಹತ್ ಗ್ರಂಥವನ್ನು ಓದಿದಾಗ ಆ ಪರಮ ಭಾಗ್ಯ ದೊರಕುವುದು ಖಂಡಿತ. ಜಿಜ್ಞಾಸುಗಳಿಗೆ ದಾರಿದೀಪವಾಗಿ ಧರ್ಮರಹಸ್ಯದ ಬಗ್ಗೆ ಕೈಗನ್ನಡಿಯಾಗಿ, ಇಂದಿನ ಮಹಿಳೆಯರಿಗೆಲ್ಲ ಅಗತ್ಯವಾಗಿ ಬೇಕಾಗಿರುವ ಆದರ್ಶಗಳನ್ನು ಒಳಗೊಂಡಿರುವ ಈ ಗ್ರಂಥರತ್ನಕ್ಕೆ ಓದುಗರನ್ನು ಸನ್ಮಾರ್ಗಗಾಮಿಗಳನ್ನಾಗಿ ಮಾಡುವ ಸಾಮರ್ಥ್ಯ ಅಪಾರವಾದದು. ಕನ್ನಡ ಓದಬಲ್ಲ ಪ್ರತಿಯೊಬ್ಬ ಸಜ್ಜೀವನ ಆಕಾಂಕ್ಷಿಗಳಿಗೆ ಉಪಯುಕ್ತವಾದ ಗ್ರಂಥ.

ಬರೆಯಿರಿ :

ರಾಮಚಂದ್ರ ಬಿ. ಮಯಾಚಾರ್ಯ,
ಪ್ರೊ : ರಾಮಕೃಷ್ಣ ವುಡ್‌ವರ್ಕ್ಸ್,
ಬಿ-10. ಎಚ್.ಎ.ಎಲ್. ಇಂಡಸ್ಟ್ರಿಯಲ್ ಎಸ್ಟೇಟ್
ಬೆಂಗಳೂರು – 560037

ವಿಶೇಷ ಸೂಚನೆ: ಶ್ರೀ ಮಾತೆ ಶ್ರೀ ಶಾರದಾದೇವಿಯವರ ಪಾದಸ್ಪರ್ಶದಿಂದ ಪವಿತ್ರಗೊಂಡಿರುವ ಬೆಂಗಳೂರು ಶ್ರೀ ರಾಮಕೃಷ್ಣ ಆಶ್ರಮದಲ್ಲಿ ಶ್ರೀ ಮಾತೆಯವರ 134 ನೆಯ ಜನ್ಮದಿನೋತ್ಸವವನ್ನು ದಿ॥ 23 ಡಿಸೆಂಬರ್ 1986 ಮಂಗಳವಾರ ಆಚರಿಸಲಾಗುತ್ತದೆ.

ಬಂದಾಗ ಗುರುಗಳು ಅವನನ್ನು ಹಣ್ಣನ್ನೇಕೆ ತಿನ್ನಲಿಲ್ಲವೆಂದು ಕೇಳಿದಾಗ ಕನಕದಾಸರು "ಯಾರು ಇಲ್ಲದ ಸ್ಥಳ ಯಾವ ಲೋಕದಲ್ಲೂ ಇಲ್ಲ. ಎಲ್ಲೆಲ್ಲಿಯೂ ಪರಮಾತ್ಮನಿದ್ದಾನೆ". ಎಂದು ಹೇಳಿದರು. ಆಗ ಉಳಿದ ಶಿಷ್ಯರಿಗೆ ಕನಕನ ಭಕ್ತಿ ಪರಾಕಾಷ್ಠೆಯ ಅರಿವು ಮೂಡಿ, ತಮ್ಮ ತಪ್ಪನ್ನು ಗ್ರಹಿಸಿ, ಆತನ ಕ್ಷಮೆ ಕೇಳಿದರಂತೆ.

ಕನಕದಾಸರಲ್ಲಿ ಭಕ್ತಿಯ ಜೊತೆಗೆ ದಿವ್ಯ ಜ್ಞಾನವೂ ಇತ್ತು ಎಂಬುದಕ್ಕೆ ಹಲವಾರು ನಿದರ್ಶನಗಳಿವೆ. ಅವುಗಳಲ್ಲೊಂದನ್ನು ಇಲ್ಲಿ ಉಲ್ಲೇಖಿಸುವದು ಉಚಿತ. ಒಂದು ದಿನ ಗುರುಗಳು ತಮ್ಮ ಕೈಯಲ್ಲಿ ಸಾಲಿಗ್ರಾಮವನ್ನು ಮುಚ್ಚಿಟ್ಟುಕೊಂಡು ಶಿಷ್ಯರನ್ನು "ನನ್ನ ಕೈಯಲ್ಲಿ ಏನಿದೆ?" ಎಂದು ಕೇಳಿದರಂತೆ. ಆಗ ಶಿಷ್ಯರು ಏನೇನೋ ವಸ್ತುಗಳ ಹೆಸರನ್ನು ಹೇಳಲು ಕೊನೆಗೆ ಕನಕದಾಸರನ್ನು ಕೇಳಲಾಗಿ "ಈತನೀಗ ವಾಸುದೇವನು" ಎಂಬ ಪದ್ಯದ ಮೂಲಕ ಅವರ ಕೈಯಲ್ಲಿ ಸಾಲಿಗ್ರಾಮವಿದೆಯೆಂದು ತಿಳಿಸಿದರಂತೆ.

ಇಂಥ ಅನೇಕ ಕಥೆಗಳಲ್ಲದೆ, ದೇವರು ಕನಕನಿಗೆ ಅಡಿಗಡಿಗೆ ಸ್ವಪ್ನದಲ್ಲಿ ಅಶರೀರವಾಣಿಯಲ್ಲಿ ಮಾರ್ಗದರ್ಶನ ನೀಡಿದನೆಂಬ ನಿದರ್ಶನಗಳು ಆತನ ಚರಿತ್ರೆಯಲ್ಲಿವೆ. ಇವುಗಳೆಲ್ಲವನ್ನು ಅವಲೋಕಿಸಿದಾಗ ಕನಕದಾಸರದು 'ಮಾರ್ಜಾಲ ಕಿಶೋರ ನ್ಯಾಯ' ಎಂಬ ಮಾತಿನಂಥ ಭಕ್ತಿ ಎಂಬುದು ತಿಳಿಯುತ್ತದೆ.

ಕನಕದಾಸರು ದಾಸಪಂಥದ ಇತರ ಭಕ್ತರಂತಲ್ಲ. ಅವರದು ಎರಡು ಕವಲಾದ ವ್ಯಕ್ತಿತ್ವ. ಒಂದು ಅಪ್ಪಟ ದಾಸನಾಗಿ, ಇನ್ನೊಂದು ಅಪ್ಪಟ ಕವಿಯಾಗಿ. ಅವರು ಕನ್ನಡದಲ್ಲಿ ಒಬ್ಬ ಸವ್ಯಸಾಚಿ ಎನ್ನಬಹುದು. ಭಕ್ತಿ ತತ್ತ್ವವನ್ನು ಸಾರಿದವರು, ಭಕ್ತಿರಸವನ್ನು ಹರಿಸಿದವರು. ಕನಕದಾಸರ ಮುಖ್ಯ ಕೃತಿಗಳೆಂದರೆ ೧. ಕೀರ್ತನೆಗಳು, ೨. ಹರಿಭಕ್ತಿ ಸಾರ, ೩. ಮೋಹನ ತರಂಗಿಣಿ ೪. ರಾಮಧಾನ್ಯ ಚರಿತೆ, ೫. ನೃಸಿಂಹ ಸ್ತೋತ್ರ ಹಾಗೂ ೬. ನಳಚರಿತ್ರೆ. ಇವೆಲ್ಲ ಕನಕದಾಸರಿಂದ ವಿರಚಿತವಾದವುಗಳೆಂಬುದಕ್ಕೆ ಮುಖ್ಯವಾದ ಕಾರಣ ಈ ಎಲ್ಲ ಕಾವ್ಯಗಳಲ್ಲಿರುವ ಅವರ 'ಕಾಗಿನೆಲೆಯ ಆದಿಕೇಶವ' ನೆಂಬ ಅಂಕಿತ.

ಕನಕದಾಸರ ಕೀರ್ತನೆಗಳೂ ಕೂಡ ಇತರ ದಾಸರ ಕೀರ್ತನೆಗಳಂತೆ ಮಾಧ್ವ ತತ್ತ್ವದ ಭಾಗವತ ಸಂಪ್ರದಾಯದ ಹರಿಯ ಮೇಲ್ಮೆಯನ್ನು ಸಾರುತ್ತಿದ್ದರೂ ಕೂಡ, ಪುರಂದರದಾಸರಂತೆ ಸಮಾಜದ ದೋಷಗಳ ದೂಷಣೆ, ಸಮಾಜ ಸುಧಾರಣೆಗಾಗಿ ಉಪದೇಶಪರ ಕೀರ್ತನೆಗಳನ್ನೂ ಹಾಡಿದ್ದಾರೆ. ಅತ್ಯುತ್ಕೃಷ್ಟವಾದ ಆದರೆ ಸುಲಭ ಶೈಲಿಯಲ್ಲಿ ಇವರ ಕೀರ್ತನೆಗಳಿದ್ದರೂ, ಇವು ನಿರಾಧಾರವಾದ, ಸ್ವಕಪೋಲ ಕಲ್ಪಿತಗಳಾದ, ನಿರರ್ಥಕ ರಚನೆಗಳಲ್ಲ. ಇವರ ಒಂದೊಂದು ಕೀರ್ತನೆಯೂ ಶಾಸ್ತ್ರಗಳ, ವೇದಗಳ, ಇತಿಹಾಸ, ಪುರಾಣಾದಿ ತಳಹದಿಯ ಮೇಲೆ ನಿಂತಿವೆ. ಇವರ ಕೀರ್ತನೆಗಳೆಷ್ಟೋ ಸಾಲುಗಳಿಂದು ಗಾದೆಮಾತುಗಳಾಗಿ ಕನ್ನಡಿಗರ ನಾಲಿಗೆಯ ಮೇಲೆ ಕಂಗೊಳಿಸುತ್ತಲಿವೆ. ಉದಾಹರಣೆಗೆ "ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡ ಜಗಳವೇ ಲೇಸು". "ಸತ್ಯವಂತರ ಸಂಗವಿರಲು ತೀರ್ಥಯಾತಕೆ। ನಿತ್ಯ ಜ್ಞಾನಿಯಾದ ಬಳಿಕ ಚಿಂತೆಯಾತಕೆ॥" ಎಂಬುವುಗಳನ್ನು ನೋಡಬಹುದು. ಇಂದಿನಂತೆ ಅಂದೂ ಕೂಡ ಸಮಾಜದಲ್ಲಿದ್ದ ಜಾತಿ–ಮತಗಳ ತಾರತಮ್ಯವನ್ನು ಕಂಡು ಕನಕದಾಸರು "ಕುಲಕುಲವೆಂದು ಹೊಡೆದಾಡಬೇಡಿರಿ" ಎಂದು ತಿಳಿ ಹೇಳಿದ್ದಾರೆ "ಬಣಗು ದೈವಗಳನು ಬತ್ತಲೆ ದೇವರ ಮುಂದೆ ಬಾಳುತಿಪ್ಪ ಕೋಣಕುರಿಯ ಏಳಬೀಳ ಕೊರಳ ಕೊಯಿದು ಕಳ್ಳು ಕೊಡನ ಬರಿದು ಮಾಡಿ" ಪೂಜೆ ಮಾಡುವ ಕುರುಡು ನಂಬಿಕೆಯನ್ನು ಅವರು ಜರಿದು 'ಪೊಳ್ಳು ದೈವರ ಗೊಡವೆ ಬೇಡ, ನರಕ ತಪ್ಪದು' ಎಂದು ಎಚ್ಚರಿಸಿದ್ದಾರೆ. 'ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ ಕಳ್ಳರಿಗೆ ಕಳ್ಳ ಬೆಳ್ಳಕ್ಕಿಯಂದದಿ ಡಂಭ ಮಾಡುವದು ತರವಲ್ಲ'ವೆಂದು ಹೇಳಿದ್ದಾರೆ. 'ಜಪವ ಮಾಡಿದರೇನು ? ತಪವ ಮಾಡಿದರೇನು ? ಕಪಟಗುಣ ವಿಪರೀತ ಕಲುಷವಿದ್ದವರು ?" ಎಂದು ಕೇಳುತ್ತಾರೆ. ಅದಕ್ಕಾಗಿ 'ಕೇಶವ ಎನ್ನಿರೋ। ಕ್ಲೇಶ ನಾಶನನ। ತನ್ನ ಆಸೆ ಪಟ್ಟವರಿಗೆ ಅಧಿಕ ಫಲ ವೀವವನ।' ಎಂದು ಹೇಳುತ್ತಾರೆ, ಅದರಂತೆ ಕೇಶವನ ಅಖಂಡ ನಾಮಸ್ಮರಣೆಯನ್ನು ಮಾಡುತ್ತ 'ಬಾಗಿಲನು ತೆರೆದು ಸೇವೆಯನು ಕೊಡೋ ಹರಿಯೇ। ಕೂಗಿದರೂ ಧ್ವನಿ ಕೇಳಲೊಲ್ಲದೆ?' ಎಂದು ಅಂತಃಕರಣದಿಂದ ಕೂಗುತ್ತಾರೆ, ಕನಕದಾಸರ ಕೊರಗು ಕೇಳಿಸದೇ ಆ ದೀನವತ್ಸಲನಿಗೆ? ಅದಕ್ಕಾಗಿ ಕನಕದಾಸನಿಗಾಗಿ ಶ್ರೀಕೃಷ್ಣನು ಗರ್ಭಗುಡಿಯ ಬಾಗಿಲು ಭದ್ರ ಪಡಿಸಿದ್ದರೂ ಗೋಡೆಯಲ್ಲಿಯ ಕಿಂಡಿಯೊಳಗಿನಿಂದ ದರ್ಶನವಿತ್ತನೆಂಬ ಕಥೆ ಜನಜನಿತವಾಗಿದೆ. ಆತನ ದರ್ಶನಭಾಗ್ಯ ತಮಗೊದಗಿದ್ದನ್ನು ಕನಕದಾಸರೇ 'ಬದುಕಿದೆನು ಬದುಕಿದೆನು ಭವ ಹಿಂಗಿತೆನಗೆ। ಪದುಮನಾಭನ ಪಾದದೊಲುಮೆ ಎನಗಾಯಿತು' ಎನ್ನುವಲ್ಲಿ ವರ್ಣಿಸಿದ್ದಾರೆ. ಈ ರೀತಿ ದಿವ್ಯದರ್ಶನ ಪಡೆದ ಕನಕದಾಸರು ತಮ್ಮ ಅನುಭವಪೂರ್ಣವಾದ ನೂರಾರು ಕೀರ್ತನೆಗಳನ್ನು ರಚಿಸಿ ಕರ್ನಾಟಕದ ಜನಜೀವನದಲ್ಲಿ ಚೈತನ್ಯವನ್ನು, ಕನ್ನಡ ಸಾಹಿತ್ಯ

(35ನೇ ಪುಟ ನೋಡಿ)

# ಭದ್ರಾಚಲ ರಾಮದಾಸರು

ಶ್ರೀಮತಿ ಆರ್. ವೆಂಕಟಲಕ್ಷ್ಮಿ

ದೈವಸಾಕ್ಷಾತ್ಕಾರಕ್ಕೆ ಸುಲಭವಾದ ಮಾರ್ಗವೆಂದರೆ "ಭಕ್ತಿಮಾರ್ಗ". ಆದ್ದರಿಂದಲೇ ಪೂಜ್ಯ ಮಹನೀಯರುಗಳು "ಭಕ್ತಿ ಒಂದೇ ಮುಕ್ತಿಸಾಧನ ಜಪ, ತಪ, ಯೋಗಸಾಧನ ಅನುಭವಿಸಲು ಕಠಿಣ" ಎಂದು ಆದೇಶವಿತ್ತಿದ್ದಾರೆ. ಹೀಗೆ ಭಕ್ತಿ ಪಂಥವನ್ನು ವಹಿಸಿಕೊಂಡು ನಿರೂಪಿಸುತ್ತಾ ಹೋದರೆ ನಮ್ಮ ಭರತಭೂಮಿಯಲ್ಲಿ ಅನೇಕ ಜನ ಭಕ್ತಮಹಾಶಯರುಗಳು ಅವತರಿಸಿ, ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡು, ಮಾನವ ಜನಾಂಗಕ್ಕೆ ಇಂದಿಗೂ ಮಾರ್ಗದರ್ಶಕರಾಗಿದ್ದಾರೆ. ಅಂತಹ ಭಕ್ತಶ್ರೇಷ್ಠರ ಪಂಗಡದಲ್ಲಿ "ಭದ್ರಾಚಲ ರಾಮದಾಸ"ರೂ ಸಹ ಒಬ್ಬರಾಗಿದ್ದಾರೆ. ಭಕ್ತಿಯೇ ಪ್ರಧಾನವೆಂದು ನಿರೂಪಿಸುವ ರಾಮದಾಸರ ಚರಿತ್ರೆ ಒಂದು ಅದ್ಭುತ ಚರಿತ್ರೆಯೆನ್ನಬಹುದು.

ಆಂಧ್ರಪ್ರದೇಶದ ಗೋದಾವರಿ ನದಿತೀರದ "ನೆಲಕೊಂಡಪಲ್ಲಿ" ಎಂಬ ಗ್ರಾಮದಲ್ಲಿ ಲಿಂಗಣ್ಣ ಹಾಗೂ ಕಮಲಾಂಬ ಎಂಬ ದಂಪತಿಗಳಿದ್ದರು. ಎಲ್ಲಾವಿಧವಾದ ಅನುಕೂಲಗಳಿದ್ದರೂ, ಸಂತಾನ ಭಾಗ್ಯವಿಲ್ಲದ ಕೊರತೆ ಆ ದಂಪತಿಗಳನ್ನು ಬಾಧಿಸುತ್ತಿತ್ತು. ಲೋಕರೂಢಿಯಲ್ಲಿ ಬಂಜೆಯೆಂಬ ಅಪವಾದವನ್ನು ಕೇಳಲಾರದೆ ಈ ದಂಪತಿಗಳು ತಮ್ಮ ಕುಲದೇವರಾದ ರಘುರಾಮನನ್ನು ಕುರಿತು ಪ್ರಾರ್ಥಿಸುತ್ತಾರೆ. ಇವರ ಪ್ರಾರ್ಥನೆಗೊಲಿದ ಶ್ರೀರಾಮಚಂದ್ರನು ಅವರಿಗೆ ಸ್ವಪ್ನದರ್ಶನವನ್ನಿತ್ತು ಆಶೀರ್ವದಿಸುತ್ತಾನೆ. ಭಗವಂತನ ಅನುಗ್ರಹಕ್ಕೆ ಪಾತ್ರರಾದ ಲಿಂಗಣ್ಣ–ಕಮಲಾಂಬೆಯರು ಧ್ಯಾನ–ಪೂಜೆಗಳಲ್ಲಿ ನಿರತರಾಗಿ ಕಾಲಕಳೆಯುತ್ತಿದ್ದಂತೆಯೇ, ದೈವಾನುಗ್ರಹ ವಿಶೇಷದಿಂದ ಕಾಮಾಂಬೆಯು ಒಂದು ಗಂಡುಮಗುವಿಗೆ ಜನ್ಮವೀಯುತ್ತಾಳೆ. ಎಲ್ಲ ಹಿರಿಯರ ಆದೇಶದಂತೆ ಆ ಮಗುವಿಗೆ "ಗೋಪನ್ನ" ಎಂದು ಹೆಸರಿಡುತ್ತಾರೆ. ಗೋಪನ್ನನು ಮಾತಾಪಿತೃಗಳ ಪ್ರೀತಿ–ವಾತ್ಸಲ್ಯದ ಮಮತೆಯ ಮಡಿಲಲ್ಲಿ ಬೆಳೆದು ಐದುವರ್ಷದ ಬಾಲಕನಾಗುತ್ತಾನೆ. ಗುರುಕುಲಾಶ್ರಮದಲ್ಲಿ ಗುರುಗಳು "ಓಂ" ಕಾರವನ್ನು ಉಪದೇಶಮಾಡಿದಾಗ, ಆ ಬಾಲಕನು "ಓಂ"ಕಾರದ ಅರ್ಥವೇನು ? ಎಂಬ ಪ್ರಶ್ನೆಯನ್ನು ಹಾಕಿ ಗುರುಗಳನ್ನೇ ಆಶ್ಚರ್ಯಪಡಿಸುತ್ತಾನೆ. ಆತನ ಬಯಕೆಯಂತೆಯೇ ಗುರುಗಳು "ಓಂ" ಕಾರವು ಅಕಾರ, ಉಕಾರ, ಮಕಾರಗಳ ಸಂಯೋಗವೆಂದೂ "ಓಂ" ಕಾರವನ್ನು ಉಚ್ಚರಿಸಿದರೆ ಜೀವನದಲ್ಲಿನ ವಿಕಾರಗಳೆಲ್ಲವೂ ಕಳೆದು ನಿಜಸಹಕಾರವು ದೊರಕುವುದು ಎಂದು ವಿವರಿಸಿದರು. ಅಷ್ಟಕ್ಕೆ ಸುಮ್ಮನಾಗದ ಆ ಬಾಲಕನು ದೇವರನ್ನು ಕಾಣುವ ಮಾರ್ಗವನ್ನು ತನಗೆ ಹೇಳಿಕೊಡಬೇಕೆಂದು ಕೇಳುತ್ತಾನೆ. 'ದೇವರ ಸಾಕ್ಷಾತ್ಕಾರಕ್ಕಾಗಿ ಮಾರ್ಗ ತೋರಿಸುವ ಮಹತ್ತೊಬ್ಬ ಮಹಾನುಭಾವರಾದ ಗುರುಗಳ ದರ್ಶನ ನಿನ್ನ ಜೀವನದಲ್ಲಿದೆ, ಆ ಪೂಜ್ಯರಿಂದ ನಿನಗೆ ರಾಮದರ್ಶನವಾಗುತ್ತದೆ' ಎಂದು ಅವರು ಮನಃಪೂರ್ವಕವಾಗಿ ಆಶೀರ್ವದಿಸುವರು.

ಪುಟ್ಟಬಾಲಕನಾಗಿರುವಾಗಲೇ ರಾಮದರ್ಶನವನ್ನು ಏಕೈಕ ಗುರಿಯನ್ನಾಗಿಟ್ಟುಕೊಂಡ ಗೋಪನ್ನನು ಒಂದು ದಿನ ತನ್ನ ಸಹಪಾಠಿಗಳೊಡನೆ ಆಡುತ್ತಿದ್ದಾಗ, ಪೂಜ್ಯ ಗುರುಗಳಾದ ಕಬೀರರು ಆ ಮಾರ್ಗವಾಗಿಯೇ ಬರುವುದನ್ನು ಕಂಡ ಹುಡುಗರು "ಕಬೀರರೊಡನೆ ರಾಮದೇವರು ಮಾತನಾಡುತ್ತಾನಂತೆ, ಜೊತೆಯಲ್ಲಿಯೇ ಕುಳಿತು ಮಗ್ಗ ನೇಯುತ್ತಾನಂತೆ" ಎಂದು ಮಾತನಾಡಿಕೊಳ್ಳುತ್ತಿದ್ದರು. ಆ ಹುಡುಗರ ಮಾತನ್ನು ಕೇಳಿಸಿಕೊಂಡ ಗೋಪನ್ನನು ಓಡಿ ಬಂದು, ಕಬೀರ "ನನ್ನಿಂದೇನಾಗ ಬೇಕು ?" ಎಂದು ಕೇಳಿದಾಗ, ತನಗೊಂದು ಮಂತ್ರೋಪದೇಶವನ್ನು ಮಾಡಬೇಕೆಂದು ಕೇಳುತ್ತಾನೆ. "ಶ್ರೀರಾಮಚಂದ್ರನ ಪಾದಸಾಕ್ಷಿಯಾಗಿ"ಯೂ ಮಂತ್ರೋಪದೇಶವನ್ನು ಮಾಡುತ್ತೇನೆಂದು ಅಭಯವನ್ನಿತ್ತರೆ ಮಾತ್ರ ಪಾದಗಳನ್ನು ಬಿಡುವುದಾಗಿ ಹೇಳುತ್ತಾನೆ. ಆ ಬಾಲಕನ ರಾಮಭಕ್ತಿಯನ್ನು ಕಂಡು ಸಂತೋಷಗೊಂಡ ಕಬೀರ "ಶ್ರೀರಾಮಪಾದ ಸಾಕ್ಷಿಯಾಗಿ"ಯೂ ಮಂತ್ರೋಪದೇಶ ಮಾಡುವುದಾಗಿ ಅಭಯಕೊಡುತ್ತಾರೆ ಅದರಂತೆ ಗೋಪನ್ನನಿಗೆ "ರಾಮಾಯಣ"ವನ್ನು ಉಪದೇಶಿಸುತ್ತಾರೆ. ಅದಕ್ಕೆ "ಸಂಕ್ಷಿಪ್ತರಾಮಾಯಣ" ವೆಂತಲೂ, "ಅಧ್ಯಾತ್ಮರಾಮಾಯಣ"ವೆಂತಲೂ ಹೆಸರಿದೆ.

ಪೂಜ್ಯ ಕಬೀರರಿಂದ ಉಪದೇಶವನ್ನು ಪಡೆದಂದಿನಿಂದ ಗೋಪನ್ನನಿಗೆ "ರಾಮದಾಸ" ಎಂಬ ಹೆಸರು ಪ್ರಾಪ್ತವಾಯಿತು. ಹೀಗೆ ತನ್ನನ್ನೇ ರಾಮಾರ್ಪಣಮಾಡಿಕೊಂಡ ರಾಮದಾಸರು ಕಮಲಾಂಬ ಎಂಬ ಕನ್ಯೆಯನ್ನು ವಿವಾಹವಾಗುತ್ತಾರೆ. ಇವರಿಗೆ ಒಂದು ಗಂಡುಮಗು ಜನಿಸುತ್ತದೆ. ಆ ಮಗುವಿಗೆ "ಕೋದಂಡರಾಮ" ಎಂದು ಹೆಸರಿಡುತ್ತಾರೆ.

ಒಂದು ರಾಮನವಮಿಯ ದಿನ ಬಂದಿತು. ರಾಮಭಕ್ತರಾದ ರಾಮದಾಸರು ಬಹಳ ವೈಭವದಿಂದ ರಾಮೋತ್ಸವವನ್ನು ನಡೆಸಿ, ಸಹಸ್ರಾರು ಮಂದಿ ವಿದ್ವಾಂಸರಿಗೂ, ಬ್ರಾಹ್ಮಣರಿಗೂ, ಹಿರಿಯರಿಗೂ ಭೋಜನಕೂಟವನ್ನೇರ್ಪಡಿಸಿ, ಗುರುಹಿರಿಯರ ಆಶೀರ್ವಾದವನ್ನು ಪಡೆಯಲು ಆಶಿಸುತ್ತಾರೆ. ರಾಮದಾಸರ ಅಭಿಲಾಷೆ ಇಂತಾದರೆ ವಿಧಿಯ ಯೋಜನೆ ಬೇರೆಯದಾಗಿತ್ತು. ಇವರ ಮಗ ಕೋದಂಡರಾಮನನ್ನು ಆತನ ಸ್ನೇಹಿತರು ತಿಂಡಿ ತರುವಂತೆ ಕೇಳಿದಾಗ, ಆ ಹುಡುಗ ಮನೆಗೆ ಬಂದು ತಾಯಿಯನ್ನು ಕೇಳಿ ಮನೆಯಲ್ಲಿ ತಯಾರಿಸಿದ ತಿಂಡಿಗಳನ್ನು ತೆಗೆದುಕೊಂಡು ತಾಯಿಯ ಆದೇಶದಂತೆ ಹುಡುಗರೆಲ್ಲರಿಂದಲೂ ರಾಮಧ್ಯಾನವನ್ನು ಮಾಡಿಸಿ, ಒಂದು ಕೊಳದ ಸಮೀಪದಲ್ಲಿ ಎಲ್ಲರಿಗೂ ತಿಂಡಿಯನ್ನು ಹಂಚುತ್ತಿದ್ದನು. ಆ ಸಮಯದಲ್ಲಿ ತಿಂಡಿಯನ್ನು ತೆಗೆದುಕೊಳ್ಳುವ ಅವಸರದಲ್ಲಿ ಹುಡುಗರು ಮುನ್ನುಗ್ಗುವಾಗ ಕೋದಂಡರಾಮನು ಜಾರಿ ಕೊಳದಲ್ಲಿ ಬೀಳುತ್ತಾನೆ. ಅದನ್ನು ಕಂಡು ಹೆದರಿದ ಹುಡುಗರು ದುಃಖಿಸುತ್ತಾ ರಾಮದಾಸರ ಮನೆಯ ಮುಂದೆ ಬಂದುದನ್ನು ಕಂಡ ರಾಮದಾಸರು ಆ ಹುಡುಗರಿಂದ ತಮ್ಮ ಮಗ ಕೋದಂಡರಾಮನು ನೀರಿನಲ್ಲಿ ಬಿದ್ದ ಸಂಗತಿಯನ್ನು ತಿಳಿಯುತ್ತಾರೆ. ಮಗನು ಮೃತನಾದ ವಿಷಯವನ್ನು ತಿಳಿದ ಕಮಲಾಂಬೆಯು ದುಃಖಿತಳಾದರೂ, ಭೋಜನ ಮುಗಿಸಿದ ಹಿರಿಯರಿಗೆ ತಾಂಬೂಲ, ದಕ್ಷಿಣೆಯನ್ನು ಕೊಟ್ಟು ಆಶೀರ್ವಾದವನ್ನು ಪಡೆಯುವವರೆವಿಗೂ ದುಃಖವನ್ನು ತೋರ್ಪಡಿಸಬಾರದೆಂಬ ರಾಮದಾಸರ ಆಜ್ಞೆಯಂತೆಯೇ, ನಗುಮುಖದಿಂದಲೇ ಹಿರಿಯರೆಲ್ಲರಿಗೂ ನಮಸ್ಕರಿಸಿ, ಆಶೀರ್ವಾದವನ್ನು ಪಡೆಯುವ ಸಮಯದಲ್ಲಿ, ಅಲ್ಲಿದ್ದ ಹಿರಿಯರೊಬ್ಬರು "ರಾಮದಾಸರೆ, ಇಷ್ಟುದಿನ ನೀವು ಯಾರಿಗಾದರೂ ನಮಸ್ಕರಿಸುವಾಗ ಮೂರು ಜನ ಇರುತ್ತಿದ್ದಿರಿ, ಇಂದೇಕೆ ನೀವಿಬ್ಬರೇ ? ನಿಮ್ಮ ಮಗ ಕೋದಂಡರಾಮನೆಲ್ಲಿ?" ಎಂದು ಕೇಳಿದಾಗ, ಸುಳ್ಳು ಹೇಳಲು ಹಿಂಜರಿದ ರಾಮದಾಸರು ತಮ್ಮ ಮಗ ಮೃತನಾದನು ಎಂಬ ಅರ್ಥವನ್ನು ಸೂಚಿಸುವಂತೆ 'ಮಗನನ್ನು ಊರಿಗೆ ಕಳುಹಿಸಿದ್ದೇನೆ' ಎಂದು ಹೇಳುತ್ತಾರೆ. ಯಾವ ಊರಿಗೆ ? ಎಂದಾಗ ಯಾವ ಊರಿನಿಂದ ಬಂದನೋ ಅದೇ ಊರಿಗೆ ಕಳುಹಿಸಿದ್ದೇನೆ – ಎಂದು ಉತ್ತರಿಸಿದಾಗ, ನಿಜ ಸಂಗತಿಯನ್ನು ತಿಳಿದ ಅವರೆಲ್ಲರೂ ಕೊಳದ ಹತ್ತಿರಕ್ಕೆ ಬರುತ್ತಾರೆ.

ದಯಾಮಯನಾದ ದೇವರ ಕೃಪೆಯಿಂದ ಆ ಸಮಯಕ್ಕೆ ಸರಿಯಾಗಿ ಗುರುಗಳಾದ ಕಬೀರರು ಅದೇ ಮಾರ್ಗದಲ್ಲಿ ಬರುತ್ತಾರೆ. ವಿಷಯವನ್ನರಿತ ಅವರು ರಾಮಧ್ಯಾನವನ್ನು ಮಾಡಿ ನೀರಿನಲ್ಲಿ

ಮುಳುಗಿದ್ದ ಕೋದಂಡರಾಮನನ್ನು ಕರೆದಾಗ, ಕೊಳದ ತಳಭಾಗದಿಂದ ಗಂಧಾಕ್ಷತೆ, ನಾಮ ತಿಲಕಗಳನ್ನು ಧರಿಸಿಕೊಂಡು ಮೇಲೆದ್ದು ಬರುತ್ತಾನೆ. ಆ ಬಾಲಕನನ್ನು ಕಂಡು ಎಲ್ಲರೂ ಭಕ್ತವತ್ಸಲನಾದ ಪರಮಾತ್ಮನನ್ನು ಕೊಂಡಾಡುತ್ತಾರೆ.

ಭದ್ರಾಚಲದಲ್ಲಿ ಶ್ರೀರಾಮದರ್ಶನವನ್ನು ಪಡೆದ ರಾಮದಾಸರು ತಮ್ಮ ಜೀವನ ಪರ್ಯಂತ ಶ್ರೀರಾಮಸೇವೆಯನ್ನು ಮಾಡಿ ಧನ್ಯರಾಗುವ ಮಹದುದ್ದೇಶದಿಂದ ಭದ್ರಾಚಲದಲ್ಲಿಯೇ ನೆಲಸಿ ರಾಮಸೇವೆಯಲ್ಲಿ ನಿರತರಾದರು. ಹೀಗೆ ರಾಮಸೇವಾ ಕಾರ್ಯದಲ್ಲಿ ನಿರತರಾಗಿದ್ದ ದಾಸರ ಜೀವನದಲ್ಲಿ ಸಂತೋಷದ ಚಿಲುಮೆ ಚಿಮ್ಮುತ್ತದೆ. ಹೈದರಾಬಾದಿನ ದೊರೆಯಾಗಿದ್ದ ತಾನೀಷಾ ಎಲ್ಲ ಕಡೆಯಿಂದಲೂ ಕಂದಾಯದ ಮೊಬಲಗನ್ನು ಪಡೆಯುತ್ತಿದ್ದರೂ, ಭದ್ರಾಚಲದಿಂದ ಮಾತ್ರ ಕಂದಾಯದ ಮೊಬಲಗು ಸರಿಯಾಗಿ ವಸೂಲಾಗದಿದ್ದ ಕಾರಣ, ಭದ್ರಾಚಲಕ್ಕೆ ನಿಷ್ಠಾವಂತರಾದ ತಹಶೀಲ್ದಾರರ ಅಗತ್ಯವರಿತು ರಾಮದಾಸರ ಪರಿಚಯವಿದ್ದ ಹಿರಿಯರ ಮಾತಿನಂತೆ ಅವರನ್ನು ಭದ್ರಾಚಲದ ತಹಶೀಲ್ದಾರರನ್ನಾಗಿ ನೇಮಕ ಮಾಡುತ್ತಾನೆ.

ವಿಷಯ ತಿಳಿದ ರಾಮದಾಸರ ಸಂತೋಷಕ್ಕೆ ಪಾರವೇ ಇಲ್ಲದಂತಾಗುತ್ತದೆ, ಕಾರಣ ತಮ್ಮ ಕೆಲಸದಿಂದ ಬರುವ ಸಂಭಾವನೆಯ ಹಣವನ್ನು ದೇವರ ಸೇವೆಗೆ ವಿನಿಯೋಗಿಸಿ, ದೇವರ ಕಾರ್ಯವನ್ನು ಮಾಡಬೇಕೆಂಬುದೇ ಅವರ ಮಹಾನ್ ಆಶಯ. ರಾಮದಾಸರು ತಮಗೆ ಬರುವ ಸಂಭಾವನೆಯ ಹಣದಿಂದ ರಾಮದೇವರ ವಿಗ್ರಹಕ್ಕೆ ಆಭರಣಗಳನ್ನು ಮಾಡಿಸಲು ಮನಮಾಡಿ ಪದಕವನ್ನೂ, ನಡುವಿಗೆ ಬಂಗಾರದ ದಾರವನ್ನೂ ಮಾಡಿಸುತ್ತಾರೆ. ಇವರ ಪತ್ನಿ ಕಮಲಾಂಬೆಯವರ ಬಯಕೆಯಂತೆ ಸೀತಾಮಾತೆಯ ವಿಗ್ರಹಕ್ಕೂ ಆಭರಣಗಳು ತಯಾರಾಗುತ್ತವೆ. ಎಲ್ಲ ವಿಗ್ರಹಗಳಿಗೂ ಆಭರಣಗಳನ್ನು ಮಾಡಿಸಿ, ಅಲಂಕರಿಸಿ, ಕಣ್ತುಂಬ ಕಂಡು ರಾಮದಾಸರು ಆನಂದ ಪರವಶರಾಗುತ್ತಾರೆ. ರಾಮದಾಸರ ಸದ್ಗುಣಗಳನ್ನು ಕಂಡ, ಅಲ್ಲಿಯ ಜನತೆ ಅವರನ್ನು ತಮ್ಮ ಗುರುಗಳೆಂದು ಭಾವಿಸಿ, ಅವರ ಆಜ್ಞೆಯಂತೆ ಉಳಿದಿದ್ದ ಆರುಲಕ್ಷ ರೂಪಾಯಿಗಳ ಕಂದಾಯದ ಹಣವನ್ನು ತಂದೊಪ್ಪಿಸುತ್ತಾರೆ. ಸಂತೋಷಗೊಂಡ ರಾಮದಾಸರು ಆ ಆರುಲಕ್ಷ ರೂಪಾಯಿಗಳನ್ನೂ ವೆಚ್ಚಮಾಡಿ ಎಲ್ಲ ವಿಗ್ರಹಗಳಿಗೂ ಮತ್ತಷ್ಟು ಆಭರಣಗಳನ್ನು ಮಾಡಿಸಿ ಹಣವೆಲ್ಲವನ್ನೂ ದೇವರ ಸೇವೆಗೆ ಸಮರ್ಪಿಸುತ್ತಾರೆ. ದಿನನಿತ್ಯದಲ್ಲಿಯೂ ಪೂಜೆ, ಬಂದುಹೋಗುವ ಭಕ್ತಾದಿಗಳೆಲ್ಲರಿಗೂ ಅನ್ನ ಸಂತರ್ಪಣೆಯನ್ನು ಏರ್ಪಡಿಸುತ್ತಾರೆ. ಹೀಗೆ ರಾಮದಾಸರು ಭದ್ರಾಚಲದಲ್ಲಿ ಜನಪ್ರಿಯರಾದುದನ್ನು ಕಂಡು, ಅವರ ಏಳಿಗೆಯನ್ನು ಸಹಿಸದ ಜನರು ಅವರ ಮೇಲಿನ ಅಸೂಯೆಯಿಂದ ತಾನೀಷಾ ದೊರೆಯಲ್ಲಿ ರಾಮದಾಸರ ಬಗ್ಗೆ ದೂರು ಹೇಳುವರು. ಜನತೆಯು ಕೊಟ್ಟ ಆರುಲಕ್ಷ ರೂಪಾಯಿಗಳನ್ನು ಸ್ವತಃ ಅವರೇ ಉಪಯೋಗಿಸಿಕೊಂಡರೆಂದು ಹೇಳಿ ತಾನೀಷಾನಿಗೆ ಕೋಪ ಬರುವಂತೆ ಮಾಡುತ್ತಾರೆ. ಕೋಪಗೊಂಡ ತಾನೀಷಾನು ರಾಮದಾಸರನ್ನು 'ಖೈದು' ಮಾಡಿ ಎಳೆತರುವಂತೆ ಭಟರನ್ನು ಭದ್ರಾಚಲಕ್ಕೆ ಕಳುಹಿಸುತ್ತಾನೆ.

ಪ್ರತಿನಿತ್ಯದ ಕರ್ತವ್ಯದಂತೆ ಶ್ರೀರಾಮಪೂಜೆಯಲ್ಲಿ ನಿರತರಾಗಿದ್ದ ರಾಮದಾಸರ ಕೈಗಳಿಗೆ ವಿಚಾರಣೆಯಿಲ್ಲದೇ ಬೇಡಿಹಾಕುತ್ತಾರೆ. ಇದೊಂದನ್ನೂ ಲೆಕ್ಕಿಸದೆ, ಸೆರೆಯಾಳಾಗುವೆನೆಂಬುದನ್ನು ಯೋಚಿಸದೆ, ತಾನು ಹಿಂದಿರುಗಿ ಬರುವವರೆವಿಗೂ ರಾಮಸೇವೆಯನ್ನು ನಿರಂತರವಾಗಿ ಮಾಡುವಂತೆ ಹೆಂಡತಿಗೆ ಹೇಳುತ್ತಾರೆ. ರಾಮದಾಸರನ್ನು ತಾನೀಷಾ ದೊರೆಯ ದರ್ಬಾರಿನಲ್ಲಿ ತಂದು ನಿಲ್ಲಿಸುತ್ತಾರೆ. ಆರುಲಕ್ಷ ರೂಪಾಯಿಗಳನ್ನು ಕುರಿತು ಕೇಳಿದಾಗ, ಆ ಹಣವನ್ನು ರಾಮಸೇವೆಗೆ ವಿನಿಯೋಗಿಸಿದ್ದೇನೆಂದು ಸತ್ಯವನ್ನು ಹೇಳಿದರೂ, ಕೇಳದೆ ರಾಜನು ರಾಮದಾಸರನ್ನು ಸೆರೆಮನೆಯಲ್ಲಿಡುತ್ತಾನೆ. (ಆ ಸೆರೆಮನೆಗೆ ಗೋಲ್ಕಂಡ ಎಂಬ ಹೆಸರಿದೆ). ಆ ಸೆರೆಮನೆಯಲ್ಲಿ ಉಸಿರಾಡುವುದಕ್ಕೂ ಕಷ್ಟವಾಯಿತು. ಆ ತೊಂದರೆಯನ್ನು ಲೆಕ್ಕಿಸದೆ ಸೆರೆಮನೆಯಲ್ಲಿಯೂ ರಾಮಧ್ಯಾನವನ್ನು ಮಾಡುತ್ತಾ ರಾಮನಲ್ಲಿಯೇ ತಲ್ಲೀನರಾಗಿದ್ದ ರಾಮದಾಸರಿಗೆ ರಾಜನ ಆಜ್ಞೆಯಂತೆ ಆಗಾಗ ಶಿಕ್ಷೆಯೂ ಆಗುತ್ತಿತ್ತು, ಬಾಸುಂಡೆಗಳು ಬರುವಂತೆ ಛಾವಟಿಯಿಂದ ಹೊಡೆಯುತ್ತಿದ್ದರು. ಪೆಟ್ಟಿನಿಂದ ಬಳಲಿದ ರಾಮದಾಸರು ಆ ನೋವನ್ನೂ ಸಹ "ರಾಮನಿಗರ್ಪಿತವಾಗಲಿ" ಎಂದೇ ಉದ್ಗರಿಸುತ್ತಿದ್ದರು, ಏನೇ ಶಿಕ್ಷೆಯಾದರೂ ರಾಮನಿಗರ್ಪಿಸಿ ನೋವಿನಿಂದ ಬಳಲಿದ ರಾಮದಾಸರು ಅನ್ನನೀರಿಗಾಗಿ ಆಸೆಪಡದೆ ರಾಮಧ್ಯಾನವೇ ಇಹಪರವೆಂದು ನಿರ್ಧರಿಸಿದರು.

ಅರೆಪಾವು ನುಚ್ಚಿಗೆ ಅರೆಪಾವು ಉಪ್ಪನ್ನು ಸೇರಿಸಿ ಮಾಡಿದ ಗಂಜಿಯನ್ನು ರಾಮದಾಸರಿಗೆ ಕೊಡುತ್ತಿದ್ದರು. ಅದನ್ನು ಕಂಡ ರಾಮದಾಸರು ರಾಮದೇವರನ್ನು ಕುರಿತು ಹೀಗೆ ಹೇಳುತ್ತಾರೆ. "ಹೇ ರಾಘವ ನಿನಗೆ ನನ್ನ ಮೇಲೆ ಕಿಂಚಿತ್ತೂ ದಯವಿಲ್ಲವೆ ? ನನ್ನ ಪಾಲಿಗೆ ಬಂದ ಹಣವನ್ನೆಲ್ಲಾ ನಿನ್ನ ಸೇವೆಗೆ ವಿನಿಯೋಗಿಸಿದೆ. ನಿನಗೆ ಮಾಡಿಸಿದ ಬಂಗಾರದ ಪದಕವನ್ನು ನಿಮ್ಮಪ್ಪ ದಶರಥ ತಂದಿದ್ದನೆ ? ಅಥವಾ ನಿಮ್ಮ ಮಾವ ಜನಕರಾಜ ಕಳುಹಿಸಿದ್ದನೆ ? ಅಷ್ಟಲ್ಲದೇ ನನ್ನನ್ನೇ ನಿನಗೆ ಅರ್ಪಿಸಿಕೊಂಡರೂ ನನ್ನನ್ನು ಈ ಬಂಧನದಲ್ಲಿರಿಸಿರುವೆಯಲ್ಲಾ" ಎಂದು ಉದ್ಗರಿಸಿ, ಸೀತಾಮಾತೆಯನ್ನು ಕುರಿತು "ನೀನಾದರೂ ನನ್ನನ್ನು ಕಾಪಾಡುವಂತೆ ಪರಂಧಾಮನಿಗೆ ಹೇಳಬಾರದೆ'' ಎಂದು ಪ್ರಾರ್ಥಿಸುತ್ತಾರೆ.

ಹೀಗೆ ಸೆರೆವಾಸವನ್ನು ಅನುಭವಿಸುತ್ತಾ, ಆಹಾರವಿಲ್ಲದೇ ರಾಮದಾಸರ ದೇಹ ಕೃಶವಾಗಿ ಹೋಗಿದೆ. ಪರಮಭಕ್ತರಾದ ರಾಮದಾಸರ ಸಂಕಟವನ್ನರಿತ ಭಕ್ತವತ್ಸಲನಾದ ಶ್ರೀರಾಮ

ಚಂದ್ರನು ದಾಸರ ರಕ್ಷಣೆಗಾಗಿ ಸೇವಕನಂತೆ ವೇಷವನ್ನು ಧರಿಸುತ್ತಾನೆ. ಶ್ರೀರಾಮದೇವರ ಸಂಗಡ ಲಕ್ಷ್ಮಣನೂ ಸಹ ಬರುತ್ತಾನೆ. ರಾಮ – ಲಕ್ಷ್ಮಣರಿಬ್ಬರೂ,ರಾಮೋಜಿ,ಲಕ್ಷ್ಮೋಜಿ ಎಂಬ ಹೆಸರಿನಿಂದ ತಾನೀಷಾದೊರೆಯ ಅರಮನೆಗೆ ಬರುತ್ತಾರೆ. ಮಧ್ಯರಾತ್ರಿಯ ಸಮಯವಾದ್ದರಿಂದ ತಾನೀಷಾನನ್ನು ಎಚ್ಚರಿಸುತ್ತಾರೆ. ಅತನು ಕಣ್ತೆರೆದು ನೋಡಿದಾಗ ಈ ಪಾವನ ಮೂರ್ತಿಗಳು ಅತನ ಮುಂದೆ ಕಂಗೊಳಿಸುತ್ತಾರೆ. ಇವರೀರ್ವರನ್ನೂ ಕಂಡ ತಾನೀಷಾನು ನೀವು ಯಾರೆಂದು ಕೇಳಿದಾಗ, ಅವರೀರ್ವರೂ ತಾವು ರಾಮದಾಸರ ಸೇವಕರೆಂದು ಹೇಳುತ್ತಾರೆ. ಅವರ ಉತ್ತರವನ್ನು ಕೇಳಿದ ತಾನೀಷಾನು ಆಶ್ಚರಿಗೊಳ್ಳುತ್ತಾನೆ. ಅಷ್ಟರಲ್ಲಿ ಈ ಪ್ರತ್ಯಕ್ಷ ಮೂರ್ತಿಗಳು ರಾಮದಾಸರು ಕೊಡಬೇಕಾದ ಹಣದ ಮೊತ್ತವನ್ನು ಕೇಳುತ್ತಾರೆ. ಆಗ ತಾನೀಷಾನು ಆರು ಲಕ್ಷ ರೂಪಾಯಿಗಳು ಎಂದಾಗ, ಲೋಕನಾಯಕನಾದ ರಘುವೀರಸಮರ್ಥನು ತನ್ನ ಅಭಯ ಹಸ್ತದಿಂದ ರಾಮಟಂಕೀ ವರಹಗಳನ್ನು ಪ್ರಸಾದಿಸುತ್ತಾರೆ. ರಾಮದಾಸರು ಕೊಡಬೇಕಾಗಿದ್ದ ಆರು ಲಕ್ಷ ರೂಪಾಯಿಗಳನ್ನು ಪಾವತಿ ಮಾಡಿದ್ದಕ್ಕಾಗಿ ರಶೀತಿಯನ್ನು ಕೇಳುತ್ತಾರೆ. ಆ ರಾತ್ರಿಯ ಸಮಯದಲ್ಲಿ ರಶೀತಿಯನ್ನು ಕೊಡಲಾಗದ ಮಹಾರಾಜನು ತಾನು ತಾಂಬೂಲವನ್ನು ಉಗಿದಿದ್ದ ಖಾನಿಯಲ್ಲಿ ತನ್ನ ಬೆರಳಿನ ಉಂಗುರವನ್ನು ಅದ್ದಿ ಒಂದು ಚೂರು ಬಟ್ಟೆಯ ಮೇಲೆ ಮುದ್ರೆಯನ್ನು ಒತ್ತಿ ಅದೇ ರಶೀತಿ ಎಂದು ಹೇಳಿ ಕೊಡುತ್ತಾನೆ. ರಶೀತಿಯನ್ನು ಪಡೆದು ರಾಮ–ಲಕ್ಷ್ಮಣರಿಬ್ಬರೂ ಅದೃಶ್ಯರಾಗುತ್ತಾರೆ.

ಅದೃಶ್ಯರಾಗಿ ಹೋದ ಆ ಮೂರ್ತಿಗಳು ಯಾರೆಂಬುದನ್ನು ತಿಳಿಯದೆ ತಾನೀಷಾನು ಅವರ ಬಗ್ಗೆಯೇ ಕನವರಿಸುತ್ತಿದ್ದುದನ್ನು ಕಂಡು ಅತನ ಪತ್ನಿ ಸಿತಾರ ವಿಷಯವನ್ನರಿತು ತನಗೆ ಶ್ರೀರಾಮ ದರ್ಶನವಾಗಲಿಲ್ಲವೆಂದು ದುಃಖಿಸುತ್ತಾಳೆ.

ತಾನೀಷಾ ದೊರೆಯೇ ಬಂದು ಸೆರೆಮನೆಯ ಬಾಗಿಲನ್ನು ತೆರೆಸಿ ಓಡಿಬಂದು ರಾಮದಾಸರ ಪಾದಗಳನ್ನಿಡಿದು ತಿಳಿಯದೆ ಮಾಡಿದ ಅಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸುತ್ತಾನೆ. ನಂತರ ರಾಮದರ್ಶನದ ಬಗ್ಗೆ ತಾನೀಷಾನು ರಾಮದಾಸರಿಗೆ ವಿವರಿಸಿದಾಗ ಭಕ್ತವತ್ಸಲನಾದ ಭಗವಂತನ ಮಹಿಮೆಯನ್ನು ತಿಳಿದ ರಾಮದಾಸರು ಆನಂದದಿಂದ ರಘುರಾಮನನ್ನು ಅನೇಕವಿಧವಾಗಿ ಕೊಂಡಾಡುತ್ತಾರೆ.

ತಾನೀಷಾದೊರೆಯು ಸಂತೋಷದಿಂದ ಆರು ಲಕ್ಷರೂಪಾಯಿಗಳನ್ನೂ ಜೊತೆಗೆ ಮತ್ತಷ್ಟು ಐಶ್ವರ್ಯವನ್ನೂ ಕೊಟ್ಟು ರಾಮದಾಸರನ್ನು ಭದ್ರಾಚಲಕ್ಕೆ ಕಳುಹಿಸಿಕೊಡುತ್ತಾನೆ. ಮಾರ್ಗ ಮಧ್ಯೆದಲ್ಲಿ ಕಳ್ಳರಿಂದ ರಕ್ಷಣೆಮಾಡಲು ರಾಮ–ಲಕ್ಷ್ಮಣರೇ ಪ್ರತ್ಯಕ್ಷ ಬಂದು ರಾಮದಾಸರನ್ನು ಸುರಕ್ಷಿತವಾಗಿ ಭದ್ರಾಚಲಕ್ಕೆ ಸೇರಿಸುತ್ತಾರೆ. ರಾಮದಾಸರು ಆನಂದಭರಿತರಾಗಿ ಎಲ್ಲ ಹಣವನ್ನೂ ಶ್ರೀರಾಮಸೇವೆಗೆ ವಿನಿಯೋಗಿಸಿ, ಅನೇಕ ವರ್ಷಗಳವರೆವಿಗೂ ಶ್ರೀರಾಮಸೇವೆಯನ್ನು ಮಾಡಿ, ಧನ್ಯರಾಗಿ ಶ್ರೀರಾಮಚಂದ್ರನ ದಿವ್ಯ ಚರಣಾರವಿಂದಗಳನ್ನು ಸೇರಿ, ಶಾಶ್ವತ ಪದವಿಯನ್ನು ಪಡೆದರು. ಹೀಗೆ ಶ್ರೀ ರಾಮದಾಸರು ದಾಸಶ್ರೇಷ್ಠರಲ್ಲಿ ಒಬ್ಬರಾಗಿ, ಇಂದಿಗೂ ಮಾನವ ಜನಾಂಗಕ್ಕೆ ಆದರ್ಶರಾಗಿದ್ದಾರೆ. ಅವರ ಪಾವನ ಮಯ ಚರಿತ್ರೆಯು ಜನತೆಯನ್ನು ಭಕ್ತಿ ಮಾರ್ಗಕ್ಕೆ ಕರೆದೊಯ್ಯುತ್ತದೆ ಎಂದರೆ ಅದು ತಪ್ಪಾಗಲಾರದು. ಒಟ್ಟಿನಲ್ಲಿ 'ಭಕ್ತಿಯಿಂದ ನಂಬಿದ ಭಕ್ತರನ್ನು ಭಗವಂತನು ಎಂದಿಗೂ ಕೈಬಿಡುವುದಿಲ್ಲ. ಅಪತ್ಕಾಲಕ್ಕೆ ಬಂದೊದಗುತ್ತಾನೆ, ಸದಾಕಾಲವು ಸಲಹುತ್ತಾನೆ ಎಂಬ ಮಾತಿಗೆ "ರಾಮದಾಸರ" ಚರಿತ್ರೆ ಒಂದು ಭಕ್ತಿಪೂರ್ವ ನಿದರ್ಶನವಾಗಿದೆ, ಅಂತೆಯೇ ಮೊದಲು ಹೇಳಿದಂತೆ "ಭಕ್ತಿ ಒಂದೇ ಮುಕ್ತಿ ಸಾಧನ" ಭಕ್ತಿಯೇ ಭಗವಂತನ ಸಾಕ್ಷಾತ್ಕಾರಕ್ಕೆ ಸುಲಭವಾದ ಮಾರ್ಗವೆಂದು ನಿರೂಪಿತವಾಗಿದೆ.

## ಭದ್ರಾಚಲ :

ಭದ್ರನೆಂಬ ಅಸುರನು ಶಾಪಗ್ರಸ್ತನಾಗಿ ಒಂದು ಬಂಡೆಯ ರೂಪದಲ್ಲಿ ಬಿದ್ದಿರಲು, ಶ್ರೀರಾಮದೇವರ ಪಾವನಮಯವಾದ ಪಾದಸ್ಪರ್ಶದಿಂದ ಆ ಅಸುರನಿಗೆ ಶಾಪ ವಿಮೋಚನೆಯಾಗುತ್ತದೆ. ಆಗ ಶ್ರೀರಾಮನು ಅತನಿಗೆ ವರವನ್ನು ಕೊಡಲು ಅಪೇಕ್ಷಿಸಿದಾಗ ಆ ರಾಕ್ಷಸನು ಸದಾಕಾಲವು ಶ್ರೀರಾಮನ ಪಾದಕಮಲಗಳು ತನ್ನ ತಲೆಯ ಮೇಲೆ ಇರಬೇಕೆಂದು ಪ್ರಾರ್ಥಿಸುತ್ತಾನೆ. ಅಂದಿನಿಂದ ಭದ್ರನು ದೊಡ್ಡ ಬೆಟ್ಟವಾಗಿರಲು, ರಾಘವನು ಅವನ ಅಪೇಕ್ಷೆಯಂತೆ ತಾನು ವಿಗ್ರಹರೂಪದಿಂದ ಸೀತಾ–ಲಕ್ಷ್ಮಣ, ಹನುಮತ್ಸಮೇತನಾಗಿ ಚಲಿಸದೆ, ಅಚಲನಾಗಿ ಅಲ್ಲಿಯೇ ಪ್ರತಿಷ್ಠಿತನಾದ್ದರಿಂದ ಆ ಪುಣ್ಯಕ್ಷೇತ್ರಕ್ಕೆ "ಭದ್ರಾಚಲ" ವೆಂಬ ಹೆಸರು ಪ್ರಾಪ್ತವಾಯಿತು.

## ಸಂಕ್ಷಿಪ್ತ ರಾಮಾಯಣ :

ಎಲ್ಲರ ಹೃದಯ ಮಂದಿರವೆಂಬ ಅಯೋಧ್ಯೆಯಲ್ಲಿ ಶುದ್ಧಬ್ರಹ್ಮನೆಂಬ ದಶರಥನಿಗೆ, ಜ್ಞಾನಶಕ್ತಿ, ಇಚ್ಛಾಶಕ್ತಿ ಹಾಗೂ ಕ್ರಿಯಾಶಕ್ತಿ ಎಂಬ ಕೌಸಲ್ಯೆ, ಸುಮಿತ್ರಾ, ಕೈಕೇಯಿ ಎಂಬ ಮೂರು ಜನ ಪತ್ನಿಯರು. ಜ್ಞಾನಶಕ್ತಿ ಎಂಬ ಕೌಸಲ್ಯೆಯಲ್ಲಿ ಜ್ಯೋತಿಸ್ವರೂಪನಾದ ಶ್ರೀರಾಮನ ಅವತಾರ. ಜ್ಯೋತಿ ಎಂಬ ರಾಮನಿಗೂ, ಮುಕ್ತಿಕಾಂತೆ ಎಂಬ ಸೀತೆಗೂ, ವಸಿಷ್ಠ ಹಾಗೂ ವಿಶ್ವಾಮಿತ್ರರಿಂದ ಕಲ್ಯಾಣವಾಯಿತು, ಎಂದರೆ ಲೋಕ ಕಲ್ಯಾಣವಾಯಿತು, ಮಾಯೆ ಎಂಬ ಮಂಥರೆಯ ಕುತಂತ್ರದಿಂದ ಜ್ಯೋತಿ ಹಾಗೂ ಕಾಂತಿ ಇಬ್ಬರೂ ಕಷ್ಟ ಎಂಬ ಕಾಡಿಗೆ ಹೋಗಬೇಕಾಯಿತು. ಇವರೀರ್ವರ ಸಂಗಡ ಕ್ರಿಯಾಗುಣ ಸಂಪನ್ನನೆಂಬ ಲಕ್ಷ್ಮಣನೂ ಸಹ ಹೊರಡುತ್ತಾನೆ, ಅಂಧಕಾರವೆಂಬ ಲಂಕೆಯಲ್ಲಿ ದಶಮುಖಮಮಕಾರನೆಂಬ ರಾವಣನು ಮುಕ್ತಿಯನ್ನು ಪಡೆಯಲೋಸ್ಕರವಾಗಿ ಮುಕ್ತಿಕಾಂತೆ ಎಂಬ ಸೀತೆಯನ್ನು ಅಪಹರಿಸಿ ತಂದು ಬಂಧನದಲ್ಲಿರಿಸುತ್ತಾನೆ. ಇತ್ತ ಕಾಂತಿಯನ್ನು ಕಳೆದುಕೊಂಡ ಜ್ಯೋತಿ, ಕಾಂತಿಯನ್ನರಸುತ್ತಾ ಕಾಡಿನಲ್ಲಿ ಸಾಗುತ್ತಿರಲು "ಮಾರುತಿ" ಎಂಬ ಶಾಂತಿ ದೊರಕಿತು. ಸಪ್ತ ವ್ಯಸನಗಳೆಂಬ ಸಮುದ್ರದಾಚೆಗಿರುವ ಅಂಧಕಾರವೆಂಬ ಲಂಕೆಯನ್ನು ಸೇರಲು ಎಪ್ಪತ್ತೇಳು ಕೋಟಿ ನರನಾಡಿಗಳೆಂಬ ಕಪಿಸ್ತೋಮವು "ರಾಮನಾಮ" ಎಂಬ ಸೇತುವೆಯನ್ನು ನಿರ್ಮಿಸಿ ಜ್ಯೋತಿ ಎಂಬ ರಾಮನನ್ನು ದಶಮುಖಮಮಕಾರನ ಮುಂದೆ ನಿಲ್ಲಿಸಲು ಅತನು ಹತನಾಗುತ್ತಾನೆ. ತದನಂತರ ಮುಕ್ತಿಯನ್ನು ಸೆರೆಯಿಂದ ಬಿಡಿಸಿತಂದು ಎಲ್ಲರ ಹೃದಯ ಮಂದಿರವೆಂಬ ಅಯೋಧ್ಯೆಯಲ್ಲಿ ಸದಾ ಪಟ್ಟಾಭಿಷಿಕ್ತರಾಗಿದ್ದಾರೆ. ಈ ಸಂಕ್ಷಿಪ್ತರಾಮಾಯಣವನ್ನು ಕಬೀರದಾಸರು, ರಾಮದಾಸರಿಗೆ ಉಪದೇಶಿಸಿದರೆಂದು ಪ್ರತೀತಿಯಿದೆ.

(ಆಧಾರ :– ಕರ್ನಾಟದ ಪ್ರಖ್ಯಾತ ಕೀರ್ತನಕಾರರಾದ ಶ್ರೀ ಆರ್. ಗುರುರಾಜುಲುನಾಯ್ಡುರವರಿಂದ ನಡೆದುಬಂದ ಕಥಾಕೀರ್ತನೆ.)



## ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷೆಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಜೈನ ಪರಂಪರೆಯ ಭಾಗವತ ಭಾರತಗಳು

**ಡಾ॥ ಎಸ್. ಅನಂತರಂಗಾಚಾರ್**

ಜೈನರು ವೈದಿಕ ಕಥೆಗಳನ್ನು ಮಾರ್ಪಡಿಸಿ ಕೊಂಡಿರುವಂತೆಯೇ ಇತಿಹಾಸಗಳಾದ ರಾಮಾಯಣ, ಭಾಗವತ ಮತ್ತು ಭಾರತ ಕಥೆಗಳನ್ನು ತಮ್ಮ ಧರ್ಮಕ್ಕೆ ಸಮನ್ವಯವಾಗುವಂತೆ ಅಳವಡಿಸಿಕೊಂಡಿರುತ್ತಾರೆ. ಜೈನ ಧರ್ಮದ ಪ್ರಧಾನ ಭಾಗಗಳಾದ ಪಂಚಾಣುವ್ರತಗಳಿಗೆ ಹೊಂದಿಕೊಳ್ಳುವಂತೆ ಮಾರ್ಪಡಿಸಿ ಪವಾಡ ಅಥವಾ ಐತಿಹ್ಯ ಭಾಗಗಳನ್ನೆಲ್ಲಾ ಕಾರ್ಯಕಾರಣಗಳಿಂದ ಸಜ್ಜುಗೊಳಿಸಿದ್ದಾರೆ.

ಜೈನರ ರಾಮಾಯಣ ಕಥೆಯು 'ಪಉಮಚರ್ಯ' ಅಥವಾ 'ಪದ್ಮಪುರಾಣ' ಅಥವಾ 'ಪದ್ಮಚರಿತೆ' ಎಂಬ ಗ್ರಂಥಗಳಲ್ಲಿ ಸಿಕ್ಕುತ್ತದೆ. ಇವುಗಳ ಆಧಾರದ ಮೇಲೆ ಕನ್ನಡದಲ್ಲಿಯೂ ನಾಗಚಂದ್ರನ 'ಪಂಪರಾಮಾಯಣಾ'ದಿ ಗ್ರಂಥಗಳು ರಚಿತವಾಗಿವೆ. ಮಹಾಭಾರತದ ಕಥೆಯು ಜೈನರ ೨೨ನೆಯ ತೀರ್ಥಂಕರನ ಚರಿತ್ರೆಯಾದ ನೇಮಿನಾಥಪುರಾಣದಲ್ಲಿ ಸಂಕಲಿತವಾಗಿದೆ. ಇದರಲ್ಲಿ ವಸುದೇವ ಅಚ್ಯುತ ಕಂದರ್ಪರ ಕಥೆಗಳನ್ನು ಕುರುವಂಶದವರ ಕಥೆಯನ್ನೂ ಜಿನಕಥೆಯೊಡನೆ ಸಮಾವೇಶಗೊಳಿಸಿ ಮೂರು ಕಥೆಗಳನ್ನು ಹಾಸುಹೊಕ್ಕಾಗಿ ಸೇರಿಸಿದ್ದಾರೆ. ಈ ಮೂರು ಕಥೆಗಳನ್ನೂ ಸೇರಿಸಿರುವ ಗ್ರಂಥಕ್ಕೆ 'ನೇಮಿನಾಥಪುರಾಣ' ಅಥವಾ 'ಹರಿವಂಶ' ಎಂಬ ಹೆಸರುಗಳಿವೆ.

ನೇಮಿನಾಥಪುರಾಣವು ಜೈನರಲ್ಲಿ ಬಹು ಜನಪ್ರಿಯವೂ, ಆಕರ್ಷಕವೂ ಆದುದು. ಈ ಕಥೆಯು ಬಹಳ ಹಿಂದಿನ ಕಾಲದಿಂದ ಬೇರೆ ಬೇರೆ ಭಾಷೆಗಳಲ್ಲಿ ರಚಿತವಾಗಿದೆ. ಕ್ರಿ. ಶ. ೭೮೩ ರಲ್ಲಿ ಪುನ್ನಾಟ ಸಂಗದ ಒಂದನೆಯ ಜಿನಸೇನಾಚಾರ್ಯನು ಒಂದು ಸಾವಿರ ಶ್ಲೋಕ ಪರಿಮಿತಿಯುಳ್ಳ ಹರಿವಂಶ ಪುರಾಣವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದನು. ಇವನಿಂದ ೧೧೫ ವರ್ಷಗಳಾದ ಮೇಲೆ ಗುಣಭದ್ರಾಚಾರ್ಯನು ತನ್ನ ಉತ್ತರಪುರಾಣದ ಭಾಗವಾಗಿ ಇದೇ ಕಥೆಯನ್ನು ೧೨೫೦ ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾನೆ. ಉಪಲಬ್ಧವಲ್ಲದ ಕವಿ ಪರಮೇಶ್ವರನ 'ವಾಗರ್ಥಸಂಗ್ರಹ'ವು ಇವೆರಡಕ್ಕೂ ಮೂಲವಿರಬೇಕೆಂದು ಊಹಿಸಲ್ಪಟ್ಟಿದೆ. ಸುಮಾರು ೧೧ ನೆಯ ಶತಮಾನದಲ್ಲಿ ವಾಗ್ಭಟನು ನೇಮಿನಿರ್ವಾಣ ಕಾವ್ಯವನ್ನು ರಚಿಸಿದ್ದಾನೆ. ಇದಕ್ಕೆ ೧೫ ನೆಯ ಶತಮಾನದಲ್ಲಿದ್ದ ಜ್ಞಾನಭೂಷಣನ 'ನೇಮಿನಿರ್ವಾಣ ಕಾವ್ಯ ಪಂಚಿಕಾ' ಎಂಬ ಟೀಕೆಯಿದೆ. ಅಪಭ್ರಂಶ ಭಾಷೆಯಲ್ಲಿ ಸ್ವಯಂಭು ಕೃತ ಹರಿವಂಶ ಪುರಾಣವೇ ಪ್ರಾಚೀನವಾದುದು. ಧವಳ (೧೦ ನೆಯ ಶತಮಾನ) ಯಶಃಕೀರ್ತಿ (೧೪೬೨) –ಇವರು ಇದೇ ಹೆಸರಿನ ಮತ್ತೆರಡು ಗ್ರಂಥಗಳನ್ನು ರಚಿಸಿದ್ದಾರೆ. ಹರಿಭದ್ರ (೧೧೫೯) ಅಮರ ಕೀರ್ತಿ (೧೧೯೦) ಲಕ್ಷ್ಮಣದೇವರು (೧೪೫೦ ಕ್ಕಿಂತಲೂ ಹಿಂದೆ) ಇದೇ ವಿಷಯಕವಾದ 'ಣೇಮಿಣಾಹು ಚರಿಉ ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಕನ್ನಡದಲ್ಲಿಯೂ ಈ ವಿಷಯಕವಾದ ಗ್ರಂಥಗಳಿಗೆ ಕೊರತೆಯೇನಿಲ್ಲ. ಇವುಗಳಿಗೆಲ್ಲ ಸಾಮಾನ್ಯವಾಗಿ ಒಂದನೆಯ ಜಿನಸೇನನ 'ಹರಿವಂಶಪುರಾಣ'ವೇ ಮೂಲವಿರಬೇಕು. ಕನ್ನಡ ನೇಮಿನಾಥ ಚರಿತ್ರೆಗಳಲ್ಲಿ ಒಂದನೆಯ ಗುಣವರ್ಮನ (ಸುಮಾರು ೯೦೦) 'ಹರಿವಂಶ'ವೇ ಪ್ರಾಚೀನವಾದುದು. ಈ ಗ್ರಂಥವು ಉಪಲಬ್ಧವಲ್ಲ. ಹತ್ತನೆಯ ಶತಮಾನಾಂತ್ಯದಲ್ಲಿ ಚಾವುಂಡರಾಯನು ತನ್ನ 'ತ್ರಿಷಷ್ಟಿ ಶಲಾಕಾಪುರುಷ ಪುರಾಣ'ದ ಭಾಗವಾಗಿ ಣೇಮಿತೀರ್ಥಂಕರ ಚರಿತ್ರೆಯನ್ನು ಗದ್ಯದಲ್ಲಿ ರಚಿಸಿದ್ದಾನೆ. ೧೨ನೆಯ ಶತಮಾನದ ಆದಿಯಲ್ಲಿ ನೇಮಿಚಂದ್ರನು ಮತ್ತೊಂದು ನೇಮಿನಾಥ ಪುರಾಣವನ್ನೂ ೧೧೪೨ ರಲ್ಲಿ ಕರ್ಣಪಾರ್ಯನು ಇನ್ನೊಂದು ನೇಮಿನಾಥ ಪುರಾಣವನ್ನೂ ಚಂಪೂ ರೀತಿಯಲ್ಲಿ ರಚಿಸಿದ್ದಾರೆ. ನೇಮಿಚಂದ್ರನ ಗ್ರಂಥವು ಅರ್ಧದಲ್ಲಿಯೇ ನಿಂತು ಹೋಗಿರುವುದರಿಂದ ಅದಕ್ಕೆ ಅರ್ಧನೇಮಿಯೆಂಬ ಹೆಸರೂ ಇದೆ. ನೇಮಿಚಂದ್ರನಾದ ಮೇಲೆ ರಚಿತವಾದ ಬಂಧುವರ್ಮನ (೧೨೦೦) 'ಹರಿವಂಶಾಭ್ಯುದಯ'ವೂ ಮಹಾಬಲ ಕವಿಯ (ಸುಮಾರು ೧೨೫೪) ನೇಮಿನಾಥಪುರಾಣವೂ ಮಂಗರಸನ (ಸುಮಾರು ೧೫೦೦) 'ನೇಮಿಜಿನೇಶ ಸಂಗತಿ'ಯೂ ಇದೇ ವಿಷಯಕವಾದ ಗ್ರಂಥಗಳು.

ನೇಮಿನಾಥಪುರಾಣದ ಆದಿ ಭಾಗದಲ್ಲಿ ನೇಮಿತೀರ್ಥಂಕರನ ಪೂರ್ವಭವಾವಳಿಗಳಾದ ವಿಂಧ್ಯಕ ಶಬರ, ಇಭ್ಯಕೇತು, ಸೌಧರ್ಮ–ಕಲ್ಪಜ, ಚಿಂತಾಗತಿ ಖಚರ, ಮಹೇಂದ್ರ ಕಲ್ಪಜ, ಅಪರಾಜಿತ, ಅಚ್ಯುತೇಂದ್ರ, ಸುಪ್ರತಿಷ್ಠ ಪಂಚಾಣೂತ್ತರಾಹಮಿಂದ್ರರ ವಿಷಯಗಳು ಸಂಗ್ರಹವಾಗಿಯೂ ಸ್ವಾರಸ್ಯವಾಗಿಯೂ ಉಕ್ತವಾಗಿವೆ. ಇವರಾದಮೇಲೆ ಹರಿವಂಶದ ಪ್ರತಿಷ್ಠನೆಂಬುವನು ಯಶೋಧರಮುನಿಗೆ ಆಹಾರದಾನ ಮಾಡಿ ಪಂಚಾಶ್ಚರ್ಯವನ್ನು ಪಡೆದು ಒಂದುದಿನ ದಿಗವಲೋಕನ ಸಮಯದಲ್ಲಿ ಉಲ್ಕಾಪಾತವನ್ನು ನೋಡಿ ವಿರಕ್ತನಾಗಿ ಸುದೃಷ್ಟಿಯೆಂಬ ಮಗನಿಗೆ ರಾಜ್ಯವಿತ್ತು ಸುಮಂದರ ಮುನಿಗಳ ಪಕ್ಕದಲ್ಲಿ ದೀಕ್ಷೆಗೊಂಡು ಸನ್ಯಸನದಿಂದ ಸತ್ತು ಜಯಂತ ವಿಮಾನದಲ್ಲಿ ಅಹಮಿಂದ್ರನಾದನು. ಇವನೇ ಮುಂದೆ ಹರಿವಂಶದ ಸಮುದ್ರವಿಜಯನಿಗೆ ಮಗನಾಗಿ ನೇಮಿನಾಥನಾಗಿ ಜನಿಸುವನು.

ಇತ್ತ ಭರತ ಕ್ಷೇತ್ರದ ಕೃತಾರ್ಥವೆಂಬ ವಿಷಯದಲ್ಲಿ ಸೌಂದರ್ಯ ಪುರವೆಂಬ ನಗರವುಂಟು. ಅದರ ಅರಸು ಶೂರಸೇನ. ಆತನ ಮಗ ಶೂರವೀರ. ಆತನ ಹೆಂಡತಿ ಧಾರಿಣಿ. (ವಾರಿಣಿ) ಅವರಿಬ್ಬರಿಗೂ ಅಂಧಕವೃಷ್ಣಿ ನರವೃಷ್ಣಿಯೆಂಬ ಇಬ್ಬರು ಮಕ್ಕಳು. ಇವರಲ್ಲಿ ಅಂಧಕವೃಷ್ಣಿಗೆ ಸುಭದ್ರೆಯೆಂಬುವಳು ಅರಸಿ. ಇವರಿಗೆ ಸಮುದ್ರವಿಜಯನೇ ಮೊದಲಾದ ಹತ್ತು ಮಂದಿ ಪುತ್ರರೂ ಕೊಂತಿಮಾದ್ರಿಯೆಂಬ ಪುತ್ರಿಯರೂ ಆದರು. ಪುತ್ರರಲ್ಲಿ ವಸುದೇವನೇ ಕೊನೆಯವನು. ವಸುದೇವನ ಹೊರತು ಉಳಿದ ರಾಜಕುಮಾರರು ಶಿವದೇವಿಯೇ ಮೊದಲಾದ ಪ್ರೇಯಸಿಯರೊಡನೆ ಸುಖವಾಗಿರುತ್ತಿದ್ದರು. ನರವೃಷ್ಟಿಯ ಮನಃಪ್ರಿಯೆ ಪದ್ಮಾವತಿ, ಅವರಿಗೆ ಉಗ್ರಸೇನ ಮಹಾಸೇನ ದೇವಸೇನರೆಂಬ ಗಂಡುಮಕ್ಕಳೂ ಗಾಂಧಾರಿಯೆಂಬ ಹೆಣ್ಣುಮಗಳೂ ಆದರು.

ಅತ್ತ ಕುರುವಂಶದ ಶವಕಿಯೆಂಬರಸನಿಗೆ ಪರಾಶರನೆಂಬುವನು ಮಗ. ಈತನಿಗೂ ಮತ್ಸ್ಯಕುಲಜಾತಿಯಾದ ಸತ್ಯವತಿಗೂ ಯಶೋವಲ್ಲಭನಾದ ವ್ಯಾಸನು ಹುಟ್ಟಿದನು. ಪರಾಶರಸುತನಾದ ವ್ಯಾಸನಿಗೂ ಸುಭದ್ರೆಗೂ ಧೃತರಾಷ್ಟ್ರ ಪಾಂಡು ವಿದುರರು ಮಕ್ಕಳಾದರು. ಪಾಂಡುವಿಗೆ ಕೊಂತಿಯ ರೂಪ ಲಾವಣ್ಯಗಳನ್ನು ನೋಡಿ ಮೋಹ ಉಂಟಾಯಿತು. ವಿರಹವೇದನೆಯನ್ನು ಅನುಭವಿಸಲಾರದೆ ವಸಂತ ವಾಸಂತವೆಂಬ ಉದ್ಯಾನ-ಭವನದಲ್ಲಿರಲು, ಆ ವನದ ಸೊಬಗಿಗೆ ಮಾರುಹೋಗಿ ವಜ್ರಮಾಳಿಯೆಂಬ ವಿದ್ಯಾಧರನು ತನ್ನ ಮನಃಪ್ರಿಯೆ ಮನೋಹರಿಯೆಂಬುವಳೊಡನೆ ವಿಹಾರಕ್ಕೆ ಬಂದು ವನವಿಹಾರವಾದ ಮೇಲೆ ತನ್ನ ಕಾಮ

## ಗಮನಿಕೆ

ವಿವಿಧಭಾಷೆಗಳಲ್ಲಿ ಸ ಪ್ತ ಗಿ ರಿ ಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ—517501

ಮುದ್ರಿಕೆಯನ್ನು ಮರೆತುಹೋದನು. ಅದು ಪಾಂಡು ಮಹಾರಾಜನಿಗೆ ಸಿಕ್ಕಿತು. ಅದನ್ನು ಹುಡುಕಿಕೊಂಡು ಹಿಂದಕ್ಕೆ ಬಂದ ವಿದ್ಯಾಧರನಿಂದ ಅದು ಕಾಮರೂಪಸಾಧನವೆಂದೂ ತಿಳಿದು, ಪಾಂಡುವು ತನ್ನ ಇಷ್ಟಾರ್ಥ ಸಾಧನೆಯಾಗುವವರೆಗೆ ತನ್ನಲ್ಲಿಯೇ ಇರಲು ಅವಕಾಶವನ್ನು ಪಡೆದು ಅದರ ಸಹಾಯದಿಂದ ತನ್ನ ಮನದನ್ನೆಯಾದ ಕೊಂತಿಯ ಅಂತಃಪುರಕ್ಕೆ ಹೋಗಿ ಅವಳಿಗೆ ತನ್ನ ನಿಜರೂಪವನ್ನು ತೋರಿಸಿ ಅವಳಲ್ಲಿ ಸಂಸರ್ಗ ಮಾಡಿದನು. ಆಕೆಯು ಗರ್ಭವನ್ನು ತಳೆದು ಮಗನನ್ನು ಹೆತ್ತಳು. ಕನ್ಯಾವಸ್ಥೆಯಲ್ಲಿಯೇ ಆ ಮಗುವನ್ನು ಪಡೆದುದರಿಂದ ಅದನ್ನು ತನ್ನಲ್ಲಿ ಇರಿಸಿಕೊಳ್ಳುವುದು ಉಚಿತವಲ್ಲವೆಂದೂ ಮಗುವನ್ನು ಪೊನ್ನಮಂಜಸಿನಲ್ಲಿಟ್ಟು ಸಖಿಯರ ಮೂಲಕ ಯಮುನೆಯಲ್ಲಿ ಬಿಡಿಸಿದಳು. ಅದನ್ನು ಚಂಪಾ ನಗರದ ಆದಿತ್ಯನೆಂಬುವನು ನೋಡಿ ಪೆಟ್ಟಿಗೆಯಲ್ಲಿದ್ದ ಆ ಮಗುವನ್ನು ತನ್ನರಸಿ ರಾಧೆಯೆಂಬುವಳಿಗೆ ಕೊಟ್ಟನು ಆ ಮಗುವು ರಾಧೆಯ ಕಿವಿಯನ್ನು ಮುಟ್ಟಿದುದರಿಂದ ಅದಕ್ಕೆ ಕರ್ಣನೆಂದು ಹೆಸರಾಯಿತು. ಆತನು ಬಹು ಶೌರ್ಯದಿಂದಲೂ ಔದಾರ್ಯದಿಂದಲೂ ಬೆಳೆಯುತ್ತಿದ್ದನು.

ಕೊಂತಿಗೆ ಪಾಂಡುರಾಜನಲ್ಲಿ ಮೋಹವೃದ್ಧಿಯಾಗುತ್ತಿರುವುದನ್ನು ಅಂಧಕ ವೃಷ್ಟಿ ತಿಳಿದು ಅವಳನ್ನೂ ಮಾದ್ರಿಯನ್ನೂ ಪಾಂಡುರಾಜನಿಗೆ ಧಾರೆಯೆರೆದನು. ಅವರಿಗೆ ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಮಕ್ಕಳಾದರು. ಹಾಗೆಯೇ ನರಪತಿವೃಷ್ಟಿಯೂ ತನ್ನ ಮಗಳು ಗಾಂಧಾರಿಯನ್ನೂ ಧೃತರಾಷ್ಟ್ರನಿಗೆ ಕೊಟ್ಟು ಮದುವೆ ಮಾಡಿದನು. ಅವರಿಗೆ ದುರ್ಯೋಧನ, ದುಶ್ಶಾಸನ ಮೊದಲಾದ ನೂರು ಮಕ್ಕಳಾದರು. ಒಂದು ದಿನ ಶೂರವೀರನು ಗಂಧಮಾಧನ ಗಿರಿಯಲ್ಲಿ ಸುಪ್ರತಿಷ್ಠ ಮುನಿವರರಲ್ಲಿ ಧರ್ಮವನ್ನು ಕೇಳಿ ಅಂಧಕ ವೃಷ್ಟಿಗೆ ರಾಜ್ಯವಿತ್ತು ದೀಕ್ಷೆಗೊಂಡನು. ಮತ್ತೆ ಹನ್ನೆರಡು ವರ್ಷಗಳಾದ ಮೇಲೆ ಸುಪ್ರತಿಷ್ಠ ಮುನಿಗಳು ಪ್ರತಿಮಾ ಯೋಗದಲ್ಲಿರಲು ಸುದರ್ಶನನೆಂಬ ದೇವನು ಅಲ್ಲಿಗೆ ಬಂದು ಉಪಸರ್ಗ ಮಾಡಿದನು. ಅದನ್ನು ಸಹಿಸಿಕೊಂಡು ಸುಪ್ರತಿಷ್ಠ ಮುನಿಗಳು ತಪಸ್ಸುಮಾಡಿ ಕೇವಲಿಗಳಾದರು. ಆಗ ಇತರರೊಡನೆ ಪೂಜೆಗೆ ಹೋಗಿದ್ದ ಅಂಧಕ ವೃಷ್ಟಿಯು ಸುದರ್ಶನನ ಉಪಸರ್ಗಕ್ಕೆ ಕಾರಣವನ್ನು ತಿಳಿದು ವೈರಾಗ್ಯವನ್ನು ತಾಳಿ ತನ್ನ ಮಗನಾದ ಸಮುದ್ರವಿಜಯನಿಗೆ ರಾಜ್ಯವನ್ನಿತ್ತು ತಪಸ್ಸು ಮಾಡಿ ಮೋಕ್ಷವನ್ನು ಪಡೆದನು.

ಸಮುದ್ರವಿಜಯನು ದಿಕ್ಪಾಲಕರಂತಿರುವ ತನ್ನ ಎಂಟು ಜನ ತಮ್ಮಂದಿರೊಡನೆ ಸುಖವಾಗಿ ರಾಜ್ಯವಾಳುತ್ತಿರಲಾಗಿ ಅವನ ಕಿರುತಮ್ಮನಾದ ವಸುದೇವನು ತನ್ನ ರೂಪುಲಾವಣ್ಯಗಳಿಂದ ಧರೆಯ ಕಣ್ಣಿಗೆ ಮುಳ್ಳಾದನು. ಅವನು ಪ್ರತಿದಿನವೂ ಆತ್ಮಸಂತೋಷಕ್ಕಾಗಿ ಪುರವೀಥಿಗಳಲ್ಲಿ ವಿಹಾರಯಾತ್ರೆಯನ್ನು ಮಾಡುತ್ತಿರುವಾಗ ಆ ರತಿರತ್ನ ಮೇರುವಿಗೆ ಊರಿನ ಅಬ್ಜಾಕ್ಷಿಯರು ಮರುಳುಗೊಳ್ಳುತ್ತಿದ್ದರು. ಆತನು ಬೀದಿಯಲ್ಲಿ ಹೊರಟ ತಕ್ಷಣವೇ 'ಪೊಳಲೊಳುಳ್ಳ ಬೆಲೆವೆಂಡಿರುಂ ಕುಲವೆಂಡಿರುಂ ಕಾಪಳಿದು ಮರುಳ್ಗೊಂಡುದುಂ ಕಂಡು ಪೌರಜನವೆಲ್ಲ ಸಮುದ್ರವಿಜಯನಲ್ಲಿಗೆ ಹೋಗಿ' ಮೊರೆಯಿಡಲು ಅವನು ಅವರು ತಂದಿದ್ದ ಮಕ್ಕಳೆಲ್ಲವೂ ವಸುದೇವನ ರೂಪು ಅಚ್ಚೊತ್ತಿದಂತೆ ಇದ್ದುದನ್ನು ಕಂಡು ಆಶ್ಚರ್ಯ ಭರಿತನಾಗಿ ಅವನನ್ನು ಹೊರಗೆ ಹೋಗದಂತೆ ಮಾಡಲಿಚ್ಛಿಸಿ ತಮ್ಮನನ್ನು ಒಳ್ಳೆಯ ಮಾತಿನಲ್ಲಿ ಹತ್ತಿರಕ್ಕೆ ಕರೆಯಿಸಿ 'ಅನುಜ, ಇದೇಕೆ ನಿನ್ನ ಮೈ ಪೊಸೆದ ಪೂವಿನಂತೆ ಆದುದು. ಆನಿದಂ ಬಗೆದೆನ್, ಆಡುವೋ ಬಿಸಿಲೊಳ್ ಈಗಳ್ ಅಬ್ಜೇಕ್ಷಣ ನೀರೊಳಂ ನೆಳಲೊಳಂ ಒಲ್ದಂತೆ ಒಲಿದು ಉಟ್ಟುಂ ತೊಟ್ಟುಂ ಸಂತಸದಿಂ ಪೂವಿನಂತೆ ಸುಖಮಿರಲಾಗ? ರಾಜಕುಮಾರರ್ ಆರ್ ಕಂಡರ್ ಆರ್ ಕೇಳ್ದರ್ ಎಂಬಂತಿರಬೇಕು. ತಿಟ್ಟನೆ ತಿರಿದು ಭಟ್ಟಿಸಿರ ವಂದೊಡೆ ಮೇಯಬಣ್ಣಂ ಪೋಕುಂ, ಲೋಕದ ಕಿಸುರುಂ ಕಣ್ಣೆಂಜಲೊಂ ಪತ್ತುವುಂ! ಇನ್ನೆಂದುಂ ಮನೆಯ ಪೊಸಂತಿಲಂ ಪೊರಮಡಲಾಗದು, ಈ ಕೃತಕಾಚಲದೊಳ್ ವನವಿಹಾರಮೆಸಗು" ಎಂದು ಒಳ್ಳೆಯ ಮಾತಿನಿಂದಲೇ ಅವನನ್ನು ಅರಮನೆಯೊಳಗೆ ಬಂಧಿಸಿಟ್ಟನು. ವಸುದೇವನು ಅಣ್ಣನ ಮಾತನ್ನು ನಿಜವೆಂದೇ ನಂಬಿ ಅಲ್ಲಿ ಕೆಲಕಾಲವಿದ್ದು ಚೇಟಕಿಯಿಂದ ತಾನು ಬಂಧಿತನಾಗಿರುವುದನ್ನು ತಿಳಿದು, ದುಃಖಿಸಿ ರಾತ್ರಿ ತಾನಿದ್ದ ಕೊಠಡಿಯ ಗವಾಕ್ಷದಿಂದಿಳಿದು ಯಾರಿಗೂ ಗೊತ್ತಿಲ್ಲದಂತೆ ಸ್ಮಶಾನದ ಕಡೆ ಹೊರಲು ಅಲ್ಲಿ ಒಂದು ಪತ್ರವನ್ನು ಬರೆದು ತನ್ನ ಆಭರಣಗಳನ್ನೆಲ್ಲ ಅದರೊಡನಿಟ್ಟು ತಾನು ಹೋದ ಹೆಜ್ಜೆ ಯಾರಿಗೂ ಅರಿಯದಂತೆ ನಡೆದು ಹೊರಟು ಹೋದನು. ಮಾರನೆಯ ದಿನ ಸಮುದ್ರವಿಜಯನು ಅದನ್ನರಿತು ತಮ್ಮನ ಸಾವಿಗೆ ಮರುಗುತ್ತಿರಲು ಅರಿತವರು 'ಅವನು ಸತ್ತಿಲ್ಲ. ಕೆಲವು ದಿನಗಳಲ್ಲಿಯೇ ನಿನ್ನಲ್ಲಿಗೆ ಬರುತ್ತಾನೆ' ಎಂದು ಸಮಾಧಾನ ಮಾಡಿದರು.

ಇತ್ತ ವಸುದೇವನು ಸ್ಮಶಾನದಿಂದ ವಿಜಯಖೇಟದ ಕಡೆಗೆ ಹೊರಟು ಅಲ್ಲಿಯ ವನದಲ್ಲಿ ತನಗಾಗಿಯೇ ಕಾಯುತ್ತಿದ್ದ ಮಗಧಾದಿಪತಿಯ ಮಗಳಾದ ಶಾಮಳೆ ಎಂಬಳನ್ನು ಮದುವೆನಿಂದು ಕೆಲವು ದಿನಮಿದ್ದು ಅಲ್ಲಿಂದ ಹೊರಟು ಮುಂದೆ ಅರಣ್ಯದಲ್ಲಿ ನಡೆದು ಕುಸುಮಾಕರವೆಂಬ ಸರೋವರದ ಸಮೀಪದಲ್ಲಿ ಬಹು ಭೀಕರವಾಗಿದ್ದ ಆನೆಯ ಸೊಕ್ಕನ್ನಡಗಿಸಿ ನಿಳಿಂಪಪುರದರಸು

ಅಶನಿವೇಗನ ಮಗಳಾದ ಶಾಲ್ಮಲಿದತ್ತೆಯನ್ನು ವರಿಸಿ ಸುಖವಾಗಿ ಕಾಲಕಳೆಯುವನು. ಒಂದು ದಿನ ಅವರು ಸುಖನಿದ್ರೆಯಲ್ಲಿರುವಾಗ ಪೂರ್ವಭವದ ದ್ವೇಷದಿಂದ ಖಚರನೊಬ್ಬನು ವಸುದೇವನನ್ನು ಸೆಳೆದೊಯ್ಯಲು ಶಾಲ್ಮಲಿದತ್ತೆ ಅವನನ್ನು ಬೆನ್ನಟ್ಟಿ ಹೋಗಿ ಬಿಡಿಸಿಕೊಂಡು ಬರುತ್ತ ದಾರಿಯಲ್ಲಿ ಒಂದು ದಿವ್ಯ ಧ್ವನಿಯ ಆದೇಶದಂತೆ ವಸುದೇವನನ್ನು ಪರ್ಣಲಘು ವಿದ್ಯೆಯಿಂದ ಚಂಪಾಪುರದ ಹೊರಭಾಗದ ಉದ್ಯಾನದಲ್ಲಿ ಇರಿಸಿಹೋಗುವಳು. ವಸುದೇವನು ಅಲ್ಲಿ ಚಾರುದತ್ತನ ಕೊಳ್ಮಗಳಾದ ಗಂಧರ್ವದತ್ತೆಯನ್ನು, ವಿಷ್ಣುವಿನ ತ್ರಿವಿಕ್ರಮಾವತಾರದಲ್ಲಿ ಗಂಧರ್ವ ದೇವರು ಅನುಗ್ರಹಿಸಿದ್ದ ಧಾರಾವಿ ಸಾರಾರಿ ಎಂಬ ವೀಣೆಗಳ ವಂಶಕ್ಕೆ ಸೇರಿದ್ದ ವೀಣೆಗಳಿದ್ದ ವೈಣಿಕ ಸ್ವಯಂವರದಲ್ಲಿ ಗೆದ್ದು ಮದುವೆ ನಿಂದು ಕೆಲಕಾಲ ಸುಖವಾಗಿದ್ದು, ಅಲ್ಲಿಗೆ ಬಂದ ಭಟರಿಬ್ಬರಿಂದ ರೋಹಿಣೀ ದೇವಿಯ ಸ್ವಯಂವರ ವಾರ್ತೆಯನ್ನು ತಿಳಿದು ಪರ್ಣಲಘು ವಿದ್ಯೆಯಿಂದ ಮಾಗಧೀ ಎಂಬ ನಗರಿಗೆ ತೆರಳುವನು. ಅಲ್ಲಿ ಸ್ವಯಂವರ ಮಂಟಪದಲ್ಲಿ ವಸುದೇವನು ಪಾಣವಿಕನ (ಮದ್ದಲೆಯವನ) ವೇಷದಲ್ಲಿ ರೋಹಿಣಿಯನ್ನು ಗೆಲ್ಲುವನು. ಅಸೂಯೆಯಿಂದ ಮೇಲೆ ಬಿದ್ದ ರಾಜರುಗಳನ್ನೂ, ತಿಳಿಯದೇ ತನ್ನ ಮೇಲೆ ಯುದ್ಧ ಮಾಡಿದ ತನ್ನ ಅಣ್ಣನಾದ ಸಮುದ್ರವಿಜಯನನ್ನೂ ಸೋಲಿಸಿ, ತನ್ನನ್ನು ಪರಿಚಯ ಮಾಡಿಕೊಂಡ ಸಮುದ್ರವಿಜಯನ ಆದೇಶದ ಮೇಲೆಯೇ ರೋಹಿಣಿಯನ್ನೂ ಮತ್ತಿತರ ಹದಿನಾರುಸಾವಿರ ಕನ್ಯಾರತ್ನಗಳನ್ನೂ ಸ್ವೀಕರಿಸಿ ಸುಖದಿಂದಿದ್ದು ಅಲ್ಲಿ ಬಂದ ಅನೇಕರಿಗೆ ಬಿಲ್ಲುವಿದ್ಯೆಯನ್ನು ಕಲಿಸುತ್ತಿರಲು ಉಗ್ರಸೇನನ ಮಗನಾದ, ಮಂಡೋದರಿ ಎಂಬುವಳಿಂದ ಪೋಷಿತನಾದ ಕಂಸನೆಂಬುವನು ಅವನ ಶಿಷ್ಯನಾಗಿ ಬಂದು ಸೇರಿ ಅದ್ಭುತ ಶಕ್ತಿಯನ್ನು ಸಂಪಾದಿಸುವನು. ಅದೇಕಾಲಕ್ಕೆ ಸರಿಯಾಗಿ ಮಗಧ ಚಕ್ರವರ್ತಿಯಾದ ಜರಾಸಂಧನು ಸಿಂಹರಥನ ಉಪಟಳವನ್ನು ಸಹಿಸಲಾರದೆ ಅವನನ್ನು ಜಯಿಸುವವರಿಗೆ ತನ್ನ ಮಗಳಾದ ಜೀವಂಜಸೆಯನ್ನೂ ಕೇಳಿದ ನಾಡನ್ನೂ ಉಂಬಳಿಯಾಗಿ ಕೊಡುವನೆಂದು ಘೋಷಣೆ ಮಾಡಿಸಿ ವಸುದೇವನಲ್ಲಿಗೆ ದೂತರನ್ನಟ್ಟುವನು. ಅಲ್ಲಿದ್ದ ಕಂಸನು ಆ ವಾರ್ತೆಯನ್ನು ಕೇಳಿ ತಾನೇ ಹೋಗಿ ಸಿಂಹರಥನನ್ನು ಸಂಹರಿಸಿ ವಸುದೇವನಿಗೊಪ್ಪಿಸಿ ಅವನ ಆದೇಶದ ಮೇಲೆಯೇ ಜರಾಸಂಧನ ಮಗಳಾದ ಜೀವಂಜಸೆಯನ್ನೂ, ತನಗೆ ಅಪ್ರಿಯವಾಗಿದ್ದ ತಂದೆಯ ಮಗಧರಾಜ್ಯವನ್ನೂ, ಜರಾಸಂಧನಿಂದ ಪಡೆದು ಜನಕನನ್ನು ಸಂಕಲೆಯಲ್ಲಿಟ್ಟು ವಸುದೇವನನ್ನು ಬರಿಸಿ ಅವನನ್ನು ಸಿಂಹಾಸನಾಲಂಕೃತನಾಗಿ ಮಾಡಿ ತನ್ನ ತಂಗಿಯಾದ ದೇವಕಿಯನ್ನು ಮದುವೆ ಮಾಡಿಕೊಟ್ಟನು. ವಸುದೇವನು ದೇವಕಿಯೊಡನೆ ಸುಖಸಾಮ್ರಾಜ್ಯದಲ್ಲಿ ಓಲಾಡುತ್ತಿರಲು ದೇವಕಿಯ ಅಗ್ರಜರಾದ ಅತಿಮುಕ್ತರೆಂಬ ಮುನಿಗಳು ಚರಿಗೆಗೆ ಬರಲು ಕಂಸನ ಹೆಂಡತಿಯಾದ ಜೀವಂಜಸೆಯು ದೇವಕಿಯ ಆನಂದ ವಸ್ತ್ರವನ್ನು ಅವರ ಮುಂದೆತ್ತಿ ಅವರನ್ನು ಅವಮಾನಪಡಿಸಲು ಅವರು ಕೋಪೋದ್ರಿಕ್ತರಾಗಿ 'ದೇವಕಿಗೆ ಪುಟ್ಟಿದ ತಾವು ಯಾವ ದೇವತೆಗಳ ಕಾಪಾದರೂ ರಕ್ಷಿಸದೆ ನಿನ್ನ ಗಂಡನನ್ನು ಕೊಲ್ಲದೆ ಬಿಡುವುದಿಲ್ಲ' ಎಂದು ಶಾಪವಿತ್ತರು. ಅದನ್ನು ಕೇಳಿದ ಕಂಸನು ಚಿಂತಾಕ್ರಾಂತನಾಗಿ ತನ್ನ ಪತ್ನಿಯನ್ನು ಸಮಾಧಾನಗೊಳಿಸಿ "ಅತಿವಿನಯವತ್ – ಧೂರ್ತಲಕ್ಷಣಂ" ಎನ್ನುವ ಹಾಗೆ ಭಯಸ್ಥನಾಗಿ ವಸುದೇವನನ್ನು ಬೇಡಿ ದೇವಕಿಯನ್ನು ತವರಿಗೆ ಕರೆದೊಯ್ಯುವ ನೆಪದಲ್ಲಿ ಅವರಿಬ್ಬರನ್ನು ಸೆರೆಯಲ್ಲಿಟ್ಟು ಆಕೆಯ ಶಿಶುಗಳೆಲ್ಲವನ್ನು ಕೊಲ್ಲುವ ಏರ್ಪಾಟು ಮಾಡಿದನು. ದೇವಕಿಯು ಮೂರು ಅವಳಿ ಕೂಸುಗಳನ್ನು ಹೆತ್ತಳು. ನೈಗಮ ದೇವನು ಅವುಗಳನ್ನು ಮಲಯಾಚಲಕ್ಕೆ ಕೊಂಡೊಯ್ದು ಆ ಸ್ಥಳದಲ್ಲಿ ಮಾಯಾಶಿಶುಗಳನ್ನಿಟ್ಟನು. ಆ ಮಾಯಾಶಿಶುಗಳನ್ನು ನೃಶಂಸನಾದ ಕಂಸನು ಕೊಂದಿಕ್ಕಿದನು. ಪುನಃ ದೇವಕಿಯು ಗರ್ಭವನ್ನು ತಾಳಿ ಭಾದ್ರಪದದ ಅಷ್ಟಮಿಯ ಅರ್ಧರಾತ್ರಿಯಲ್ಲಿ ಕೃಷ್ಣನೆಂಬ ಮಗುವನ್ನು ಪಡೆದಳು. ಆಗ ವಸುದೇವನು ಕಂಸನ ಭಯದಿಂದ ಆ ಶಿಶುವನ್ನು ಮಥುರಾಪುರದ ಹೊರಗಿದ್ದ ಗೊಲ್ಲಪಲ್ಲಿಯ ನಂದನಿಗೆ ಕೊಟ್ಟು ಆತನಿಗೆ ಬೇಡವಿದ್ದ ಪೆಣ್ಗೂಸನ್ನು ತಂದು ದೇವಕಿಯ ಬಳಿಯಲ್ಲಿ ಮಲಗಿಸಲು, ಕಂಸನು ಆ ಶಿಶುವನ್ನು ದೇವಕಿಯ ಪುತ್ರಿಯೆಂದೇ ಭಾವಿಸಿ ಅದರ ಮೂಗು ಮುರಿದು ಮುನಿಯ ಶಾಪವನ್ನು ಉತ್ತರಿಸಿಕೊಂಡನೆಂದುಕೊಂಡನು. ಆ ಶಿಶುವು ಕೆಲಕಾಲದ ಮೇಲೆ ನಿರ್ವೇಗವನ್ನು ಪಡೆದು ಜಿನದೀಕ್ಷೆಯನ್ನು ವರಿಸಿತು. ಅದರೆ ಮಥುರಾಪಟ್ಟಣದಲ್ಲಿ ಅನೇಕ ಉತ್ಪಾತಗಳುಂಟಾದವು. ಕಂಸನು ಅವುಗಳಿಂದ ತನ್ನ ಶತ್ರುವು ಬೆಳೆಯುತ್ತಿರುವನೆಂಬುದನ್ನು ನೈಮಿತ್ತಿಕರಿಂದ ತಿಳಿದು, ಅವನನ್ನು ಸಂಹಾರ ಮಾಡುವುದಕ್ಕಾಗಿ ತನ್ನ ಪೂರ್ವಭವದ ಏಳ್ವರ್ ದೇವತೆಗಳನ್ನು ಕರೆದು "ದೇವಕಿಯ ಮಗನೆಲ್ಲಿರ್ಪನ್ ಎಂಬುದನ್ನು ಭೇದಿಸಿ ಕೊಲ್ಲಿಂ" ಎನಲು ಅವರು ಪೂತನಿಯಾಗಿ, ಗಾಡಿಯಾಗಿ, ಮತ್ತಿಯ ಮರವಾಗಿ, ತಾಳೆಯ ಗಿಡವಾಗಿ, ಎತ್ತಾಗಿ, ಕತ್ತೆಯಾಗಿ ಕುದುರೆಯಾಗಿ – ಆ ಬಾಲಕನನ್ನು ಕೊಲ್ಲಲು ಪ್ರಯತ್ನಪಟ್ಟು ವಿಫಲರಾದರು. ಕೃಷ್ಣನ ಬಾಲಲೀಲೆಯು ಎಲ್ಲರಿಗೂ ಆಶ್ಚರ್ಯಕರವಾಯ್ತು. ಒಂದು ದಿನ ಅತಿವೃಷ್ಟಿಯಾಗುತ್ತಿದ್ದಾಗ "ಕೊಡೆಯಂ ಕ್ರೀಡಾರಸಕ್ಕೆತ್ತುವಂತೆ ಕಿತ್ತೆತ್ತಿದೆನ್ ಒಂದೇ ಕಯ್ಯೊಳೆ ಮಹಾಗೋವರ್ಧನಾದ್ರಿ ಇಂದ್ರಮಂ". ಇನ್ನೊಂದು ದಿನ "ಯಾವದಸ್ತಿ ಪ್ರತೀಕಾರಃ ತಾವತ್ಕಾರ್ಯಾಕ್ ಪ್ರತಿಕ್ರಿಯಾಂ" ಎಂಬ ಉದ್ದೇಶದಿಂದ ವೃಷಭಾಕಾರದಲ್ಲಿ ಬಂದ ಅರಿಷ್ಟನೆಂಬುವನನ್ನು ಸೋಲಿಸಿ ಓಡಿಸಿದ. ಇದೆಲ್ಲವನ್ನೂ ಕೇಳಿದ ದೇವಕಿ ವಸುದೇವರು ಸಂತೋಷಗೊಂಡು ಗೋಮುಖಿವ್ರತ ವ್ಯಾಜದಿಂದ ಬಂದು ಕೃಷ್ಣನನ್ನು ನೋಡಿ ತಮ್ಮ ಮಗನ ಶಕ್ತಿಗೂ ಸಾಹಸಕ್ಕೂ ವಿಸ್ಮಯಪಟ್ಟು ಹಿಂತಿರುಗಿದರು. ಆ ವೇಳೆಗೆ ಸರಿಯಾಗಿ ನಾಗಶಯ್ಯೆಯೂ ಶಾರ್ಙ್ಗಚಾಪವೂ ಹುಟ್ಟಿದವು. ಆ ನಾಗಶಯ್ಯೆಯನ್ನೇರುವವನೆ ಆ ಶಾರ್ಙ್ಗಧನುವನ್ನು ಏರಿಸುವವ. ಆ ಪಾಂಚಜನ್ಯವನ್ನು ಪೂರೈಸುವವನು ಚಕ್ರಿಯಾಗುವನೆಂದು ಕಂಸನು ನೈಮಿತ್ತಿಕರಿಂದ ತಿಳಿದು ಅದನ್ನು ಆಗಲೇ ಅರಿಯಬೇಕೆಂದು ಆ ಕೆಲಸ ಮಾಡಿದವರಿಗೆ ತನ್ನ ಮಗಳನ್ನು ಕೊಡುವನೆಂದು ಘೋಷಣೆಮಾಡಿದನು. ಒಡನೆಯೇ ಕೃಷ್ಣನು ನಾಗಶಯ್ಯೆಯನ್ನೇರಿ ಶಾರ್ಙ್ಗಚಾಪವನ್ನೇರಿಸಿ ಪಾಂಚಜನ್ಯವನ್ನು ಪೂರೈಸಿದನು. ಅದನ್ನು ನೋಡಿ ಮೆಚ್ಚಿದಂತೆ ಕಂಸನು ನಟಿಸಿ ನಾಗಗೃಹದೊಳಿರುವ ಸಾವಿರ ದಳದ ತಾವರೆಯ ಹೂವನ್ನೂ ತರಬೇಕೆಂದು ಕೃಷ್ಣನನ್ನು ಕೇಳಿಕೊಂಡನು. ಕೃಷ್ಣನು ವಿಷದ ಮಡುವಿನಂತಿದ್ದ ಕಾಳಿಂದಿಯ ಮಡುವನ್ನು ಕ್ರೀಡಾಸರೋವರವನ್ನು ಪ್ರವೇಶ ಮಾಡುವಂತೆ ಪ್ರವೇಶಿಸಿ ಅಲ್ಲಿದ್ದ ಕಾಳಿಯೆಂಬ ವಿಷಸರ್ಪವನ್ನು ಹಿಡಿದು ಅದರೊಡನೆ ಸಹಸ್ರದಳ ಕಮಲವನ್ನು ಕಂಸನಿಗಿತ್ತನು. ಯಾವ ವಿಧದಲ್ಲಿಯೂ ತನ್ನ ಶತ್ರುವು ನಾಶವಾಗದಿದ್ದುದನ್ನು ನೋಡಿ ಮಂತ್ರಿಗಳ ಸೂಚನೆಯಂತೆ ಕಂಸನು ಕುವಳಯಾಪೀಡನೆಂಬ ಆನೆಯನ್ನು ತರಿಸಿ ಅದರಿಂದ ಕೃಷ್ಣನನ್ನು ಸಂಹಾರ ಮಾಡುವ ಯೋಚನೆ ಮಾಡಿ ಹಾಗೆಯೇ ಚಾಣೂರನೆಂಬ ಮಲ್ಲನನ್ನು ಬರಮಾಡಿ ಅವನಿಗೆ ಕೃಷ್ಣನನ್ನು ಕೊಂದುಹಾಕಬೇಕೆಂದು ಆಜ್ಞೆ ಮಾಡಿದನು. ಚಾಣೂರನು ಸರ್ವಸಿದ್ಧನಾಗಿದ್ದಾಗ, ಯಶೋದೆಯ ಆಶೀರ್ವಾದ ಪಡೆದು ಜೊತೆಯ ಗೋಪಾಲಕರೊಡನೆ ಹೊರಟು ದಾರಿಯಲ್ಲಿ ರಜಕನನ್ನು ಮರ್ದಿಸಿ ಅವನಲ್ಲಿದ್ದ ರಾಜ ವಸ್ತ್ರಗಳನ್ನು ಅಲಂಕರಿಸಿಕೊಂಡು ಕಂಸನ ಅರಮನೆಯನ್ನು ಪ್ರವೇಶಿಸಿ ಮುಕುಂದನು ನಗುತ್ತ 'ಅಟ್ಟತ್ತಿಂಬ ದೈವಕ್ಕೆ ದಾಳಂಬಿಟ್ಟಿ' ಎಂದು ಅವನ ಮೇಲೆ ಯುದ್ಧ ಮಾಡಿ ಅವನನ್ನು ಸಂಹಾರ ಮಾಡಿದನು. ಅವನಾದಮೇಲೆ ಮುಷ್ಟಿಕರೆಂಬ ಬೇರೆ ಮಲ್ಲಾದಿಗಳು ಕೃಷ್ಣನನ್ನು ಮುತ್ತಲು ಅವರನ್ನೂ ಸಂಹಾರ ಮಾಡಿದನು. ಕಂಸನ ಚತುರ್ಬಲವು ಬಲದೇವ ವಾಸುದೇವರಿಂದ ಪೆಣಮಯವಾಗಿ ಮಾಡ

ಲ್ಪಟ್ಟಿತು. ಆಗ ಕೃಷ್ಣನು ನರಸಿಂಹನು ಕಾಳ ರಕ್ಕಸನನ್ನು ನಖದಿಂದ ತೊಡೆ ಸೀಳಿದಂತೆ ಕಂಸನನ್ನು ಸಂಹಾರ ಮಾಡಿದನು. (ಇಲ್ಲಿಗೆ 'ಅರ್ಧನೇಮಿಯು' ವಿರಮಿಸುವುದು).

ಕಂಸ ವಧೆಯಾದ ಮೇಲೆ ತಮ್ಮ ಮೇಲೆ ಬಿದ್ದ ಇತರ ವಿರೋಧಿಗಳನ್ನೆಲ್ಲ ಗೆದ್ದು ಬಲದೇವ ವಾಸುದೇವರು ಉಗ್ರಸೇನನನ್ನು ಸೆರೆಯಿಂದ ಬಿಡಿಸಿ ಸುಖವಾಗಿರುತ್ತಿರಲು ಜೀವಂಜಸೆಯು ಮೂಲಕ ತನ್ನ ಅಳಿಯನಾದ ಕಂಸನು ವಾಸುದೇವನಿಂದ ಮರಣವನ್ನೈದಿದ್ದನ್ನು ಜರಾಸಂಧನು ತಿಳಿದು ಆವನ ಮೇಲೆ ತನ್ನ ಸೈನ್ಯವನ್ನು ಕಳುಹಿಸುವನು. ಅವನ ಕಡೆಯ ಅಪರಾಜಿತ ಕಾಲಯವನನೇ ಮೊದಲಾದವರು ಸೋತು ಓಡುವರು. ಪುನಃ ಕಾಲಯವನನು ದಂಡೆತ್ತಿ ಬಂದಾಗ ಯಾದವರ ಪುಣ್ಯದೇವತೆಯು ಯಾದವರೆಲ್ಲ ಸತ್ತರೆಂಬ ಭ್ರಾಂತಿಯನ್ನುಂಟುಮಾಡಲು ಜರಾಸಂಧನು ಅದನ್ನು ಕೇಳಿ ಸಂತುಷ್ಟನಾದನು.

ಯಾದವರು ಜರಾಸಂಧನ ಬಾಧೆಯನ್ನು ತಪ್ಪಿಸಿಕೊಳ್ಳಲು ಮಧುರೆಯನ್ನು ಬಿಟ್ಟು ಸಮುದ್ರ ಮಧ್ಯದಲ್ಲಿ ದ್ವಾರಾವತಿಯನ್ನು ಕುಬೇರನಿಂದ ನಿರ್ಮಿಸಿ ಸುಖವಾಗಿರುವರು. ಬಲರಾಮರಿಗೆ ರೇವತಿಯೊಡನೆ ವಿವಾಹವಾಗುವುದು. ಕೃಷ್ಣನಿಗೆ ಸತ್ಯಭಾಮೆ, ರುಕ್ಮಿಣಿ, ಜಾಂಬವತಿ, ಸುಸೀಮೆ, ಲಕ್ಷ್ಮಣೆ, ಗಾಂಧಾರಿ, ಗೌರಿ, ಪದ್ಮಾವತಿಯೆಂಬ ಎಂಟು ಜನ ರಾಣಿಯರಾಗುವರು. ರುಕ್ಮಿಣಿಗೆ ಒಂದು ಮಗು ಹುಟ್ಟಿ ಪೂರ್ವಭವದ ವೈರದಿಂದ ಅಪಹರಿಸಲ್ಪಟ್ಟು, ನಡುದಾರಿಯಲ್ಲಿ ಎಸೆಯಲ್ಪಡಲಾಗಿ ಅದು ಕಾಳಶಂಬರನೆಂಬ ವಿದ್ಯಾಧರನಿಗೆ ಸಿಕ್ಕುವುದು. ಅವನು ಅದನ್ನು ತನ್ನ ಹೆಂಡತಿಯಾದ ಕಾಂಚನಮಾಲೆಗೆ ಸಲಹೆಕೊಟ್ಟು ಪ್ರದ್ಯುಮ್ನನೆಂದು ನಾಮಕರಣ ಮಾಡಿ ಯುವಕನಾದ ಮೇಲೆ ಯುವರಾಜ್ಯಾಭಿಷೇಕ ಮಾಡುವನು. ಪ್ರದ್ಯುಮ್ನನು ತನ್ನ ತಂದೆಯ ಎಲ್ಲ ಶತ್ರುಗಳನ್ನು ಜಯಿಸಿ ಸುಖದಿಂದಿರುವನು. ಅವನಿಗೆ ಸೌಂದರ್ಯಾತಿಶಯದಿಂದ ಮನ್ಮಥನೆಂಬ ಹೆಸರಾಗುವುದು. ಸಾಕುತಾಯಿಯಾದ ಕಾಂಚನಮಾಲೆಯು ಮಗನಾದ ಪ್ರದ್ಯುಮ್ನನಲ್ಲಿ ಮೋಹಗೊಳ್ಳುವಳು, ಅವನು ಒಪ್ಪದಿರಲು ಅವನ ಮೇಲೆ ಚಾಡಿ ಹೇಳಿ ಕಾಳಶಂಬರನಿಂದ ಅವನನ್ನು ಕೊಲ್ಲಿಸುವ ಏರ್ಪಾಡುಮಾಡಲು ಆಸಂದರ್ಭದಲ್ಲಿ ಅನೇಕವಾದ ವಿದ್ಯಾಪ್ರಾಪ್ತಿಯಾಗುವುದು. ನಾರದರಿಂದ ಮನ್ಮಥನು ತನ್ನ ತಂದೆ ತಾಯಿಗಳಾರು ಎಂಬುದನ್ನು ತಿಳಿದು ಮೊದಲು ಅವರ ಮೇಲೆ ಯುದ್ಧ ಮಾಡಿ ಕೊನೆಗೆ ಪರಿಚಯವಾದ ಮೇಲೆ ಅವರಿಂದ ಸ್ವೀಕೃತನಾಗಿ ಯುವರಾಜನಾಗುವನು. ತಾನು ಹಿಂದೆ ಕಾಡಿನಲ್ಲಿ ವರಿಸಿದ್ದ ರತಿಯನ್ನು ದ್ವಾರಾವತಿಯಿಂದ ಕರೆದು ತಂದಿದ್ದ ಉದಧಿಕುಮಾರಿಯನ್ನೂ ಮತ್ತಿತರ ನೂರೆಂಟು ಹುಡುಗಿಯರನ್ನೂ ವಿವಾಹವಾಗುವನು. ಕೃಷ್ಣ ಜಾಂಬವತಿಯರಿಗೆ ಶಂಭುಕುಮಾರನು ಉದಯಿಸುವನು.

ಇದೇ ಕಾಲದಲ್ಲಿ ದ್ವಾರಾವತಿಯಲ್ಲಿ ಬಲರಾಮ ಕೃಷ್ಣ ಮನ್ಮಥರಿಂದ ಒಲಿಸಿಕೊಳ್ಳುತ್ತಿದ್ದ ಸಮುದ್ರವಿಜಯರಾಜನಿಗೆ ಶಿವದೇವಿಯು ಉದರದಲ್ಲಿ ಹಿಂದೆ ಅಹಮಿಂದ್ರನಾಗಿದ್ದ ದೇವನು ನೇಮಿಸ್ವಾಮಿಯಾಗಿ ಉದಯಿಸುವನು. ಗರ್ಭಾವತರಣ ಜನ್ಮಾಭಿಷವ ಕಲ್ಯಾಣಗಳಾದ ಮೇಲೆ ಬಾಲಲೀಲೆಯನ್ನು ಮುಗಿಸಿ ದಿವ್ಯ ಸುಂದರ ದೇಹವನ್ನು ಧರಿಸಿ ತಾರುಣ್ಯವನ್ನು ತಾಳುವನು

ಹಸ್ತಿನಾವತಿಯಲ್ಲಿ ಪಾಂಡುವು ವೈರಾಗ್ಯಪರನಾಗಿ ಮಾದ್ರಿಯೊಡನೆ ತಪಸ್ಸಿಗೆ ಹೊರಟು ಹೋಗುವನು. ಭೀಷ್ಮನು ಕೌರವ ಪಾಂಡವರನ್ನು ರಕ್ಷಿಸುತ್ತಿದ್ದು ಅಲ್ಲಿಗೆ ಬಂದ ಬ್ರಾಹ್ಮಣನಾದ ದ್ರೋಣನೆಂಬುವನಿಗೆ ಕೃಪನ ತಂಗಿಯಾಗಿ ಸುಂದರಿಯೆಂಬುವಳನ್ನು ಕೊಟ್ಟು ಮದುವೆ ಮಾಡಿ ಆತನನ್ನು ಬಾಲಕರ ವಿದ್ಯಾಗುರುವನ್ನಾಗಿ

(25 ನೇ ಪುಟ ನೋಡಿ)

# ವಿಜಯತೇ ಗಂಗಾಮನೋಹಾರಿಣಿ

ವಿದ್ವಾನ್ ಬ. ನ. ಗುಂಡೂರಾವ್

ಶೈಲಾಧಿರಾಜತನಯೆಯ ಹುಟ್ಟು, ಬೆಳವಣಿಗೆ, ಸುಕುಮಾರ ಸೌಂದರ್ಯ, ಮಹಿಮೆ ಮಹತ್ತ್ವಗಳು – ಭಾರತೀಯ ಸಾಹಿತ್ಯದ ಅವಿಭಾಜ್ಯ ಅಂಗ. ಜಾಹ್ನವಿಯ ಕಲ್ಯಾಣ ಪೂರ್ಣ ಇತಿಹಾಸ ಆರ್ಯಸಾಹಿತ್ಯದ ಪುಟ ಪುಟಗಳಲ್ಲಿ ತುಂಬಿದೆ. ಆದಿ ಕವಿಯಿಂದ ಆಧುನಿಕ ಕವಿಯವರೆಗೂ, ಗಂಗೆಯನ್ನು ಕೊಂಡಾಡಿ ಧನ್ಯರಾದವರು ಅನೇಕಮಂದಿಯುಂಟು. ಗಂಗೆಯ ಪುಣ್ಯಸ್ಪರ್ಶವಿಲ್ಲದೆ, ಭಾರತೀಯ ಕಾವ್ಯಧಾರೆ ಅಪೂರ್ಣ. ಆದ್ದರಿಂದಲೇ ನಮ್ಮ ಕವಿಗಳಿಗೆ ಭಾಗೀರಥಿಯ ವರ್ಣನೆಯೆಂದರೆ ತುಂಬ ಪ್ರಿಯವಸ್ತು. ನಮ್ಮವರ ದೃಷ್ಟಿಯಲ್ಲಿ ಗಂಗೆ ಕೇವಲ ಹಿಂದು ನದಿಯಲ್ಲ–ವಾರಿಧಾರೆಯಲ್ಲ, ಶತಮಾನಗಳ ಭಾರತೀಯ ಸಂಸ್ಕೃತಿಯ ಜೀವಂತ ಪ್ರತೀಕ, ನಮ್ಮ ರಾಷ್ಟ್ರದ ಭವ್ಯೇತಿಹಾಸದ ಸಮುಜ್ಜ್ವಲ ಸಾಕ್ಷಿ.

ನದಿಯಾಗಲೀ, ಬೆಟ್ಟವಾಗಲೀ, ಗಿಡವಾಗಲೀ, ಬಳ್ಳಿಯಾಗಲೀ, ಕವಿಗಳು ಎಲ್ಲಕ್ಕೂ ಜೀವ ತುಂಬುತ್ತಾರೆ. ಜೀವಂತ ವ್ಯಕ್ತಿಯಂತೆ ರೂಪ ಕೊಡುತ್ತಾರೆ. ದೇವತ್ವದ ಪಟ್ಟ ಕಟ್ಟುತ್ತಾರೆ. ಎಲ್ಲವಸ್ತುಗಳಲ್ಲೂ ದೈವತ್ವವನ್ನು ಕಾಣುವುದೇ ಭಾರತದೇಶದ ವೈಶಿಷ್ಟ್ಯ.

ಆದಿಕವಿ, ಋಷಿಕವಿ, ರಾಮನಾಮಜಪ ಪರಿಪೂತದ್ರಷ್ಟಾರ ಕವಿವಾಲ್ಮೀಕಿ ಗಂಗೆಯ ಭವ್ಯ ಇತಿಹಾಸವನ್ನು ದಿವ್ಯತರವಾಗಿ ಚಿತ್ರದ್ದಾನೆ.

ಸಗರ ಚಕ್ರವರ್ತಿ ಇಕ್ಷ್ವಾಕು ವಂಶದ ಮೌಳಿಮಣಿ. ಆತನ ಅಶ್ವಮೇಧಾಶ್ವವನ್ನು ಮಹೇಂದ್ರ ಅಪಹರಿಸಿಕೊಂಡು ಹೋಗಿ, ಪಾತಾಳದಲ್ಲಿ ಕಪಿಲ ಮಹರ್ಷಿಯ ಆಶ್ರಮದಲ್ಲಿ ಬಿಟ್ಟ. ಸಗರ ಪುತ್ರರು ಕುದುರೆಯನ್ನು ಹುಡುಕಿತರಲು ಹೋಗಿ, ಕಪಿಲರ ಕ್ರೋಧದೃಷ್ಟಿಗೆ ಸಿಕ್ಕಿ ಭಸ್ಮೀಭೂತರಾದರು. ಆ ವಂಶದಲ್ಲಿ ಅಂಶುಮಂತ, ದಿಲೀಪ........ ಮುಂತಾದವರು ದೊರೆಗಳಾಗಿ ಬಂದನಂತರ ಭಗೀರಥ ಅಧಿಕಾರಕ್ಕೆ ಬಂದ. ತನ್ನ ಹಿರಿಯರಿಗೆ ಸದ್ಗತಿ ದೊರೆತು ಅವರು ಚರಿತಾರ್ಥರಾಗಬೇಕೆಂಬ ಸದುದ್ದೇಶದಿಂದ, ದಿವಿಜನದಿಯಾದ ಗಂಗೆಯನ್ನು ಭೂಲೋಕಕ್ಕೆ ತಂದು, ಮೃತರಾದ ಹಿರಿಯರ ಚಿತಾಭಸ್ಮದ ಮೇಲೆ ಹರಿಸಬೇಕೆಂದು ಈತನ ಸಂಕಲ್ಪ. ಗಂಗೆಯನ್ನು ಕುರಿತು ತಪಸ್ಸು ಮಾಡಿದ. ಆಕೆ ಪ್ರತ್ಯಕ್ಷವಾದಳು, ಆದರೇನು? "ನನ್ನ ವೇಗಕ್ಕೆ ನಿನ್ನ ಭೂಲೋಕವೇ ಕೊಚ್ಚಿ ಹೋದೀತು. ಆದ್ದರಿಂದ, ನನ್ನ ವೇಗವನ್ನು ಧರಿಸಬಲ್ಲ–ಭರಿಸಬಲ್ಲ, ಶಿವನನ್ನು ಒಪ್ಪಿಸುವುದು ಲೇಸು" ಎಂದಳು. ಭಗೀರಥ ನಿರಾಶನಾಗಲಿಲ್ಲ–ಕೈಲಾಸಾಧಿಪತಿಯನ್ನು ಕುರಿತು ತಪಸ್ಸು ಮಾಡಿದ. ಕರುಣಾಳು ಶಂಕರ, ಭಕ್ತ ಭಗೀರಥನ ಪ್ರಾರ್ಥನೆಯನ್ನು ಒಪ್ಪಿಕೊಂಡ.

ಶಿರಸಾ ಧಾರಯಿಷ್ಯಾಮಿ ಶೈಲರಾಜಸುತಾ ಮಹಂ–ಎಂದು ಅಭಯ ಪ್ರದಾನವಮಾಡಿದ. ದೇವಲೋಕದಿಂದಿಳಿದು ಬಂದ ಗಂಗಾಪ್ರವಾಹವನ್ನು ಭಕ್ತವಶಂಕರ ಶಂಕರ, ತನ್ನ ಜಟಾಜೂಟದಲ್ಲಿ ಬಂಧಿಸಿಟ್ಟ. ಆ ವ್ಯೋಮಕೇಶನ ಜಟಾಮಂಡಲ ಗಹ್ವರದಲ್ಲೇ ಬಹುಕಾಲ ಗಿರಗಿರ ಸುತ್ತುವುದಾಯ್ತೇ ವಿನಃ ಗಂಗೆ ನೆಲಕ್ಕೆ ಬೀಳಲಿಲ್ಲ. ಭಗೀರಥ, ಪುನಃ ಶಿವನನ್ನು ಧ್ಯಾನಿಸಿ, ಮೆಚ್ಚಿಸಿ, ಅನುಗ್ರಹರೂಪವಾಗಿ ಗಂಗೆಯನ್ನು ಪಡೆಯಬೇಕಾಗಿ ಬಂತು. ಮಹದೇವ, ಆ ಭಯಂಕರ ಪ್ರವಾಹವನ್ನು ಹ್ಲಾದಿನಿ–ಪಾವನಿ–ನಳಿನಿ–ಸುಚಕ್ಷು–ಸೀತಾ–ಅಲಕನಂದಾ–ಸಿಂಧು–ಎಂಬ ಸಪ್ತಧಾರೆಗಳಾಗಿ ವಿಂಗಡಿಸಿ, ಮೂರು ಧಾರೆಗಳು ಪೂರ್ವಕ್ಕೂ, ಮೂರುಧಾರೆಗಳು ಪಶ್ಚಿಮಕ್ಕೂ, ಅಲಕನಂದಾ ಎಂಬ ಧಾರೆ, ಭಗೀರಥನ ರಥದ ಹಿಂದೆ, ಗಂಭೀರವಾಗಿ ಪ್ರವಹಿಸಬೇಕೆಂದೂ ಆಜ್ಞೆ ಮಾಡಿದ. ರಘುಕುಲದರಸ ಭಗೀರಥ ಧನ್ಯೋಸ್ಮಿಯೆಂದು ಅಲಕನಂದಾ ಸಮೇತ ಹೊರಟ. ಮಾರ್ಗಮಧ್ಯೆ ಮತ್ತೆ ಅಡಚಣೆ ಬಂತು. ಅಲಕನಂದಾ ಪ್ರವಾಹಕ್ಕೆ ಜಹ್ನು ಋಷಿಯ ಆಶ್ರಮ ತೂರಿಹೋಯ್ತು. ಗಂಗೆಯ ದಿಟ್ಟತನಕ್ಕೆ ಕುಪಿತನಾದ ಆ ಮಹರ್ಷಿ ನದಿಯನ್ನು ಆಪೋಶನ ತೆಗೆದುಕೊಂಡ. ದೊರೆ ಕ್ಷಮಾಯಾಚನೆ ಮಾಡುತ್ತ ಅಂಗಲಾಚಿ ಬೇಡಿಕೊಂಡಾಗ, ಋಷಿ, ಅಲಕನಂದೆಯನ್ನು ಪುನಃ ಅನುಗ್ರಹಿಸಿದ. ಅಂದಿನಿಂದ ಆಕೆಗೆ ಜಾಹ್ನವಿ ಎಂದು ಹೆಸರಾಯ್ತು. ಅಲಕನಂದೆ, ಹಸುವನ್ನು ಹಿಂಬಾಲಿಸುವ ಕರುವಿನಂತೆ, ರಾಜನ ರಥದ ಹಿಂದೆ ಹೊರಟಳು. ಆಕೆಯ ವೈಭವವನ್ನು ಆದಿಕವಿ ವಾಲ್ಮೀಕಿ ತನ್ನ ಅಮರ ಕಾವ್ಯದಲ್ಲಿ-ಅಮರ ವಾಣಿಯಲ್ಲಿ ಅನನ್ಯ ಸಾಧಾರಣ ಚೇತೋಹಾರೀ ಶೈಲಿಯಲ್ಲಿ – ಮನೋಜ್ಞವಾದ ಧಾಟಿಯಲ್ಲಿ ಬಣ್ಣಿಸಿದ್ದಾನೆ. ವಾಲ್ಮೀಕಿಯ ವರ್ಣನೆಗಳೆಂದರೆ ಉಪಮೆ ರೂಪಕಗಳು ಮಾಲೆಮಾಲೆಯಾಗಿ ಓಲಾಡಿ ಬರುತ್ತವೆ. ಚಿತ್ರೋಪಮವಾದ ಕವಿವಾಣಿಯಿಂದ ಮೂಡಿಬಂದ ದಿವಿಜ ನದಿಯ ಶಬ್ದ ಚಿತ್ರ ಈ ರೀತಿ ಇದೆ–

ಅಸರ್ಪತ ಜಲಂ ತತ್ರ  
ತೀವ್ರ ಶಬ್ದ ಪುರಸ್ಕೃತಂ ।  
ದಿದೃಕ್ಷವೋ ದೇವಗಣಾಃ  
ಸಮೀಯು ರಮಿತೌಜಸಃ ॥  
ಸಂಪತದ್ಭಿಃ ಸುರಗಣೈಃ  
ತೇಷಾಂ ಚಾಭರಣೌಜಸಾ ।  
ಶತಾದಿತ್ಯ ಮಿವಾಭಾತಿ  
ಗಗನಂ ಗತತೋಯದಂ ॥  
ಶಿಂಶುಮಾರೋರಗಗಣೈಃ  
ಮೀನೈರಪಿ ಚ ಚಂಚಲೈಃ ।  
ವಿದ್ಯುದ್ಭಿರಿವ ವಿಕ್ಷಿಪ್ತೈಃ  
ಆಕಾಶ ಮಭವತ್ತದಾ ॥  
ಪಾಂಡುರೈಃ ಸಲಿಲೋತ್ಪೀಡೈಃ  
ಕೀರ್ಯಮಾಣೈಃ ಸಹಸ್ರಧಾ ।  
ಶಾರದಾಭ್ರೈರಿವಾಕೀರ್ಣಂ  
ಗಗನಂ ಹಂಸ ಸಂಪ್ಲವೈಃ ॥

ಕ್ವಚಿತ್ ಧೃತತರಂ ಯಾತಿ
ಕುಟಿಲಂ ಕ್ವಚಿದಾಯತಂ।
ವಿನತಂ ಕ್ವಚಿದುದ್ಭೂತಂ
ಕ್ವಚಿದ್ಯಾತಿ ಶನೈಃ ಶನೈಃ ॥
ಸಲಿಲೇ ನೈವ ಸಲಿಲಂ
ಕ್ವಚಿದಭ್ಯಾಹತಂ ಪುನಃ।
ವ್ಯರೋಚತ ತದಾ ತೋಯಂ
ನಿರ್ಮಲಂ ಗತಕಲ್ಮಷಂ ॥

ಗಂಗಾನದೀ ತೀರದಲ್ಲಿ, ಭಾರತದೇಶದ ಸುಪ್ರಸಿದ್ಧ ರಾಜ್ಯ ಸಾಮ್ರಾಜ್ಯಗಳು ಬಾಳಿ ಬೆಳಗಿವೆ. ಭಾಗೀರಥೀ ತೀರದಲ್ಲಿ ವಿಖ್ಯಾತ ರಾಜಮಹಾರಾಜರು, ರಾಜಸೂಯ, ಅಶ್ವಮೇಧಾದಿ ಕ್ರತುಗಳನ್ನಾಗಿ ಆಚರಿಸಿದ್ದಾರೆ. ಪರಮ ಪೂಜ್ಯ ಋಷಿಗಳ ಪುಣ್ಯಾಶ್ರಮಗಳು ಈ ನದೀತೀರದಲ್ಲಿ, ಆಧ್ಯಾತ್ಮ ವಿದ್ಯಾಕೇಂದ್ರಗಳಾಗಿ ಬೆಳೆದಿವೆ. ಇಕ್ಷ್ವಾಕುವಂಶದೀಪಕರಾದ, ಸೀತಾ ರಾಮಲಕ್ಷ್ಮಣರು, ತಮ್ಮ ವನವಾಸದವಧಿಯಲ್ಲಿ ಜಾಹ್ನವೀತೀರ ಪ್ರದೇಶವನ್ನು ತಮ್ಮ ಪಾದ ಧೂಳಿಯಿಂದ ಪಾವನ ಗೊಳಿಸಿದ್ದಾರೆ. ಈ ಸಂದರ್ಭದಲ್ಲಿ ಅವರು ಕಂಡ ದಿವಿಜನದಿ ಗಂಗೆ ಹೇಗಿತ್ತು? ಆದಿಕವಿಯ ಮಾತಿನಲ್ಲಿ ಕೇಳೋಣ–

ತತ್ರ ತ್ರಿಪಥಗಾಂ ದಿವ್ಯಾಂ।
ಶೀತ ತೋಯ ಮಶೈವಲಾಂ
ದದರ್ಶ ರಾಘವೋ ಗಂಗಾಂ
ರಮ್ಯಾಂ ಋಷಿನಿಷೇವಿತಾಂ ॥
ದೇವದಾನವ ಗಂಧರ್ವೈಃ
ಕಿನ್ನರೈ ರುಪಶೋಭಿತಾಂ।
ನಾಗ ಗಂಧರ್ವ ಪತ್ನೀಭಿಃ
ಸೇವಿತಾಂ ಸತತಂ ಶಿವಾಂ ॥
ದೇವಕ್ರೀಡ ಶತಾಕೀರ್ಣಾಂ
ದೇವೋದ್ಯಾನಯುತಾಂ ನದೀಂ।
ದೇವಾರ್ಥಮಾಕಾಶ ಗತಾಂ
ವಿಖ್ಯಾತಾಂ ದೇವಪದ್ಮಿನೀಂ ॥
ಜಲಾಘಾತಾಟ್ಟಹಾಸೋಗ್ರಾಂ
ಫೇನನಿರ್ಮಲ ಹಾಸಿನೀಂ।
ಕ್ವಚಿದ್ವೇಣೀಕೃತ ಜಲಾಂ
ಕ್ವಚಿದಾವರ್ತ ಶೋಭಿತಾಂ ॥
ಕ್ವಚಿತ್‌ಸ್ತಿಮಿತ ಗಂಭೀರಾಂ
ಕ್ವಚಿತ್ ವೇಗಸಮಾಕುಲಾಂ।
ಕ್ವಚಿತ್ ಗಂಭೀರ ನಿರ್ಘೋಷಾಂ
ಕ್ವಚಿತ್ ಭೈರವ ನಿಸ್ವನಾಂ ॥
ಕ್ವಚಿದಾಭೋಗ ಪುಳಿನಾಂ
ಕ್ವಚಿನ್ನಿರ್ಮಲ ವಾಲುಕಾಂ।
ಹಂಸ ಸಾರಸ ಸಂಘುಷ್ಟಾಂ
ಚಕ್ರವಾಕೋಪಶೋಭಿತಾಂ।
ಕ್ವಚಿತ್ ತೀರರುಹೈಃ ವೃಕ್ಷೈಃ
ಮಾಲಾಭಿರಿವ ಶೋಭಿತಾಂ।
ಕ್ವಚಿತ್‌ಫುಲ್ಲೋತ್ಪಲ ಚ್ಛನ್ನಾಂ
ಕ್ವಚಿತ್ ಪದ್ಮವನಾಕುಲಾಂ ॥

ಇಲ್ಲಿ ಕ್ಷಣ ಕ್ಷಣಕ್ಕೂ ತನ್ನ ಅದ್ವಿತೀಯ ರಮಣೀಯತೆಯ ಭಿನ್ನ ಭಿನ್ನ ರೂಪಗಳನ್ನು ತೋರಿಸುತ್ತ ಬೆಡಗಿನಿಂದ ಮೆರೆದಾಡುವ ಶೈಲಸುತೆ, ಬಿಂಕದ ಸಿಂಗಾರಿಯಂತೆ ಕಾಣುತ್ತಾಳೆ.

ಕನ್ನಡದ ಕವಿಗಳಲ್ಲಿ ಕುಮಾರವಾಲ್ಮೀಕಿಯೆಂದು ಪ್ರಸಿದ್ಧನಾಗಿರುವ ತೊರವೆಯ ನರಹರಿ, ಭಾಮಿನೀಷಟ್ಪದಿ ರಚನೆಯಲ್ಲಿ, ಕವಿಕುಲತಿಲಕ ಕುಮಾರವ್ಯಾಸನ ಸರಿಸಾಟಿಯಾಗಿ ನಿಲ್ಲಬಲ್ಲ ಧೀಮಂತ ಕವಿ. ಈ ಭಕ್ತ ಕವಿಯ ಲಲಿತವಚೋವೈಖರಿಯಲ್ಲಿ ಗಂಗೆಯವರ್ಣನೆ ಹೀಗಿದೆ–

ಹರಿಪದಾಬ್ಜ ಪರಾಗ ಪೂರಿತ
ಪರಿಮಳಾಲಂಕೃತೆಯ ಶಶಿಶೇ
ಖರ ಜಟಾ ತಟಪಟಲ ಸಂಘಟಿತಾಘ ವಿಸ್ಫುಟೆಯ।
ಸುರನರೋರಗ ಭುವನ ಪಾವನ
ತರ ಚರಿತ್ರೆಯ ನಿಜೋನ್ನತ
ಕರ ಕಮಂಡಲ ಮಂಡಿತೆಯ ಕಂಡನು ರಘುಪ್ರವರ ॥
ಶ್ರುತಿ ಸಮಾಜ ತರಂಗಮಯ ಪೂ
ರಿತ ಸುಧಾಮಲ ಸಲಿಲಮಯ ಸಂ
ಭೃತ ಸುಮುಕ್ತಾಫಲ ನಿಭೋತ್ಕರ ಸೈಕತಾಳಿಮಯ।
ಕೃತ ಜಗತಿ ಪಾವನಮಯ ಪ್ರ
ಚ್ಯುತ ಭವಾಖಿಲ ದುರಿತಮಯ ಶೋ
ಭಿತೆಯ ಸುಮನಸ್ತುತೆಯ ಕಂಡನು ರಾಮ ಜಾಹ್ನವಿಯ ॥

ಹರಿಪದೋದ್ಭವೆಯೂ, ಜಗತ್ತ್ರಯ ಪರಮಪಾವನಿಯೂ, ಪುರತ್ರಯಹರ ಶಿರೋಮಂಡಿತೆಯೂ ಆದ ದಿವಿಜ ನದಿಜಾಹ್ನವಿಯನ್ನು ಕುರಿತು ಬರೆಯುವಾಗ ಕವಿ ಲಕ್ಷ್ಮೀಶ ಮೈರೆತು ಹೋಗುತ್ತಾನೆ. ನಾಡಲೋಲ ಲಕ್ಷ್ಮೀಶನ ಮಾತು ರಸ ಭರಿತ, ನವರಸ ಭರಿತ. ವರ್ಣನೆಯಲ್ಲಿ, ವಾರ್ಧಿಕಷಟ್ಪದಿ ರಚನೆಯಲ್ಲಿ, ಅಗ್ರಮಾನ್ಯ ಕವಿ ಲಕ್ಷ್ಮೀಶನ ವಾಣೀವಿಲಾಸ ಕನ್ನಡ ಸಾಹಿತ್ಯದ ಅತ್ಯಮೂಲ್ಯ ಅಕ್ಷಯ ನಿಧಿ–ಆಸ್ತಿ. ಕರ್ನಾಟಕವಿ ಚೂತವನ ಚೈತ್ರನೆಂದೇ ಪ್ರಸಿದ್ಧನಾಗಿರುವ ಈತನ ಕಾವ್ಯದಲ್ಲಿ ದಿವಿಜನದಿಯ ವರ್ಣನೆ ಹೀಗಿದೆ–

ಅನ್ನೆಗಂ ಜಾನಕಿಯ ಕಣ್ಗೆ ತೋರಿತು ಮುಂದೆ
ಸನ್ನುತ ರಘೂದ್ವಹನ ಕೀರ್ತಿಯೆನೆ
ಮೂವಟ್ಟೆಯನ್ನಡೆದು ಮುಕ್ಕಣ್ಣನಂ ಸಾರ್ದು
ಮೂಜಗದ ಪಾಪಮಂ ಮುರಿದು ಮುಕ್ಕಿ।
ಮುನ್ನೀರು ಮುಂತಾಗಿ ಮೂದೇವರೊಳಗಾದ
ಮುನ್ನುಳ್ಳ ಮೂವತ್ತು ಮೂಕೋಟಿ ವಿಬುಧರಂ
ತನ್ನೊಳ್ಮುಳುಗಿದರಣಕಿಪ
ಪೆಂಪೊದವಿ ಪರಿವ ಬೊಳ್ಪೊನಲ್ ದಿವಿಜನದಿಯ ॥
ತೆರೆತೆರೆದ ಕಲ್ಲೋಲಮಾಲೆಗಳ ಲೀಲೆಗಳ
ಬೆರೆ ಬೆರೆವ ರಾಜಹಂಸಾಳಿಗಳ ಕೇಳಿಗಳ
ಸರಿ ಪರಿಯ ನೀರ್ವನಿಗಳಾಕರದ ಶೀಕರದ
ನೊರೆಯ ಬೊಬ್ಬುಳಿಯ ಸುಳಿಯ।
ಮೊರೆ ಮೊರೆದು ಘೂರ್ಮಿಸುವ ಪರಿವುಗಳ ಮುರಿವುಗಳ
ತಿರು ತಿರುಗಿಸುವಳಿ ಜಲ ಜಂತುಗಳ ಗೊಂತುಗಳ
ನೆರೆನೆರೆದು ಮುನಿಜನಂ ಸೇವಿಸುವ
ಭಾವಿಸುವ ಗಂಗೆಗವನಿಜೆ ಬಂದಳು ॥

ಆಧುನಿಕ ಕನ್ನಡ ಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಯವರ "ಗಂಗಾವತರಣ" ಅತ್ಯುತ್ತಮ ಭಾವಗೀತೆ. ಕವಿಯ ದೃಷ್ಟಿಯಲ್ಲಿ ಗಂಗೆ ರಸಪೂರಚೈತನ್ಯೆ–ಸಚ್ಚಿದಾನಂದ ಕನ್ಯೆ. ಎಚ್ಚೆತ್ತು ಎದ್ದು ಆಕಾಶದುದ್ದ ಧರೆಗಿಳಿಯಲಿದ್ದ ಧೀರೆ. ಸತ್ತಜನರನ್ನು

ಎತ್ತಬಾ–ಎಂದು ಕವಿ ಬೇಡುತ್ತಾನೆ. ಹರಿಯ ಅಡಿಯಿಂದ ಹರನ ಜಡೆಯಿಂದ ಋಷಿಯ ತೊಡೆಯಿಂದ ಇಳಿದು ಬಾತಾಯಿ–ಎಂದು ಆಹ್ವಾನಿಸುತ್ತಾನೆ. ಬೇಂದ್ರೆಯವರ ದೃಷ್ಟಿಯಲ್ಲಿ ಇದು ವಾರಿಧಾರೆಯಲ್ಲ – ವಾತ್ಸಲ್ಯ ಧಾರೆ!!

ಭಾಷೆ ಯಾವುದಾದರೇನು? ಭಾಗೀರಥಿಯ ಭಾವ ಗಾಂಭೀರ್ಯದ ಸೊಗಸು ದಿವ್ಯವಾಗೇ ಇರುತ್ತದೆ. ತೆಲುಗು. ಸಹಜವಾಗಿಯೂ ಮೃದು ಮಧುರ ಲಲಿತ ಭಾಷೆ ಈ. ಭಾಷೆಯ ಸನ್ಮಾನ್ಯಕವಿ ಶ್ರೀಪಾದ ಕೃಷ್ಣಮೂರ್ತಿ ಶಾಸ್ತ್ರಿಗಳ ಗಂಗಾವರ್ಣನೆ ಹೀಗಿದೆ–

ರಂಗ ದಭಂಗ ತುಂಗ ತರಂಗ
ಪರಂಪರನ್ ಗಪ್ಪಿ
ದಿಕ್ಕುಲನ್ ನಿಂಗಿ ನೆಸಂಗವೊಂಗಿ ಪದಿ
ನೇಲನ್ ಬಡೆನ್
ಪಡುಚುಂಡ ಶಂಭುಡಗ್ಗ್ಂಗನ್
ಜಟಾಕಲಾಪಮುನ
ಗಾರವಮಾಗದಾಲ್ಚಿ ನಂತನಾ ಸಂಗತಿ
ನೇರು ಧಾರಿಣಿಕಿ
ಜಾರೆ ಸುಪರ್ವುಲು ಜೂಚುಚುಂಡಗನ್
ಸಲಲಿತಕಲಹಂಸ ಕಲನಾದ ಮುಂಜೀರ
ರವ ಕಲಿತ ಮಹೋನ್ನತ ಪದಗತಿಯು
ವಿಮಲ ಸಾರ ತುಷಾರ ವಿಶದ
ಫೇನೋತ್ತರ
ಪರಮೋತ್ತರ ದುಕೂಲ ವಸನ ಧೃತಿಯು
ಸತತ ಪರಿಸ್ಫುಟ ಝಂಪಾ ಪ್ರಭಾ
ಭ್ರಾಜಮಾನ
ಮೀನೇಕ್ಷಣ ಮಹಿತ ರುಚಿಯು
ಪವನವೇಗೋಚ್ಚಲ ಧ್ಭಂಗ ಪರಂ
ಪರಾನಿಶಲ ಸದ್ರವ
ವಚೋ ನಿಭೃತ ರುಚಿಯುನ್ ಗಲಿಗಿ
ನುರುಗುಲ ನವ್ವುಚು ಲಲಿತ ಗರಳ್ಳ
ನಾಡುಚುನು
ಸುಳ್ಳಂಬಾಡುಚು ವೇಡುಕಮೆಯಿ
ಸೊಗಸುಗತ್ತೆಯುತೆರಂಗುನ
ಜೂಡನೊಪ್ಪಿ ದಿಗಿಯೆ ನೇಲಕು
ದಿವಿನುಂಡಿ ವಿನುವಾಕ ವೆಗಡುಲೇಕ

ತೆರೆತೆರೆಗಳಿಂದುರುಳುರುಳಿ ಬರುವ ಸುಳಿಗುರುಳ ಲಲನಾ ಲಾಸ್ಯ ಮಧುಧಾರೆಯಂತಿರುವ ಗಂಗೆಯ ವರ್ಣನೆ ಚಿತ್ರೋಪಮವಾಗಿ ಮೂಡಿ ಬಂದಿದೆ.

ಜಗತ್ಪೂಜ್ಯರಾದ ಶಂಕರ ಭಗವತ್ಪಾದರು ತಮ್ಮ ಗಂಭೀರ ಕೃತಿಗಳ ಮೂಲಕ ಭಾರತೀಯ ಸಾಹಿತ್ಯದಲ್ಲಿ ಅದ್ವಿತೀಯ ಸ್ಥಾನವನ್ನು ಗಳಿಸಿಕೊಂಡಿರುವಂತೆ ತಮ್ಮ ಅಮೂಲ್ಯ ಗಂಭೀರವಾಣಿಯಿಂದ ವಿವಿಧ ದೇವಿ ದೇವತೆಗಳನ್ನು ಸ್ತುತಿಸಿ ಭಾರತೀಯ ಸ್ತೋತ್ರ ಸಾಹಿತ್ಯಕ್ಕೆ ಅನರ್ಘ್ಯಕಾಣಿಕೆ ಸಲ್ಲಿಸಿದ್ದಾರೆ. ಆಚಾರ್ಯವರ್ಯರು ದಿವಿಜನದಿ ಜಾಹ್ನವಿಯನ್ನು ಚೇತೋಹಾರಿಯಾದ ಧಾಟಿಯಲ್ಲಿ ಕೊಂಡಾಡಿದ್ದಾರೆ ಶೈಲ ಸುತಾಸಪತ್ನಿಯೂ. ಸ್ವರ್ಗಾರೋಹಣ

(22 ನೇ ಪುಟ ನೋಡಿ)

ವಶ್ಯವಾಕ್ ಆದ ಸಿದ್ಧಕವಿ ಭಗವತ್‌ಪಾದರು ಒಂದು ಕವಿತೆಯಲ್ಲಿ ತಮ್ಮ ಅಂತಿಮ ಇಚ್ಛೆಯನ್ನು ಭಾಗೀರಥಿಯ ಮುಂದೆ ಬಿನ್ನಹರೂಪದಲ್ಲಿ ತೋಡಿಕೊಂಡಿದ್ದಾರೆ. ಬಹುಶಃ ಆ ಮಾತು ಸಮಸ್ತ ಭಾರತೀಯರ ಮನೋಭಾವವನ್ನು ಪ್ರತಿನಿಧಿಸುವಂತೆ ಯಾವ ಪುಣ್ಯ ಚೇತನಕ್ಕಾದರೂ ಭಾಸವಾದೀತು.

ಮಮ ಪ್ರಾಣ ಪ್ರಯಾಣೋತ್ಸವೇ ಭೂಯಾದ್ಭಕ್ತಿ ರವಿಚ್ಯುತಾ
ಹರಿ ಹರಾದ್ವೈತಾತ್ಮಿಕಾ ಶಾಶ್ವತೀ–ಎಂದು ಬೇಡಿಕೊಂಡಿದ್ದಾರೆ.
ನಾಹಂ ಜಾನಾಮಿ ತವ ಮಹಿಮಾನಂ
ಪಾಹಿ ಕೃಪಾಮಯಿ ಮಾ ಮಜ್ಞಾನಿನಂ

—ಎಂದು ಪ್ರಾರ್ಥಿಸುವ ಭಗವತ್‌ಪಾದರು ಭಗವತಿ ಜಾಹ್ನವಿಯನ್ನು ಕುರಿತು ಬರೆದಿರುವ ಈ ಶ್ಲೋಕಗಳ ಸೌಂದರ್ಯವನ್ನು ಸಹೃದಯರು ಗಮನಿಸಬೇಕು–

ಶಂಕರಮೌಳಿವಿಹಾರಿಣಿ ವಿಮಲೇ
ಮಮ ಮತಿರಾಸ್ತಾಂ ತವ ಪದಕಮಲೇ ।
ತವ ಜಲ ಮಮಲಂ ಯೇನ ನಿಪೀತಂ
ಪರಮಪದಂ ಖಲು ತೇನ ಗೃಹೀತಂ ॥
ಹರಿಪದ ಪಾದ್ಯತರಂಗಿಣಿ ಗಂಗೇ
ಹಿಮವಿಧುಮುಕ್ತಾಧವಳ ತರಂಗೇ ।
ದೂರೀಕುರು ಮಮ ದುಷ್ಕೃತಿಭಾರಂ
ಕುರು ಕೃಪಯಾ ಭವಸಾಗರಪಾರಂ ॥
ಪುನರಸದಂಗೆ ಪುಣ್ಯತರಂಗೇ
ಜಯ ಜಯ ಜಾಹ್ನವಿ ಕರುಣಾಪಾಂಗೆ ।
ಇಂದ್ರ ಮಕುಟ ಮಣಿರಾಜಿತ ಚರಣೇ
ಸುಖದೇ ಶುಭದೇ ಭೃತ್ಯ ಶರಣ್ಯೇ ॥

ಲಸತ್ತರಂಗ ಸಂಗ ಧೂತ ಭೂತ ಜಾತ ಪಾತಕಾ
ನವೀನ ಮಾಧುರೀ ಧುರೀಣ ಭಕ್ತಿ ಜಾತ ಚಾತಕಾ ।
ತಟಾಂತ ವಾಸ ದಾಸ ಹಂಸ ಸಂಸ್ಕೃತಾಹಿ ಕಾಮದಾ
ಧುನೋತು ಮೇ ಮನೋಮಲಂ ಮುನೀಂದ್ರನಂದಿನೀ ಸದಾ ॥

ತರಂಗ ಸಂಗಸೈಕತಾಂಚಿತಾಂತರಾ ಸದಾ ಸಿತಾ
ಶರನ್ನಿಶಾಕರಾಂಶು ಮಂಜು ಮಂಜರೀಸಭಾಜಿತಾ ।
ಭವಾರ್ಜನಾಯ ಚಾರುಣಾಂಬುನಾಧುನಾ ವಿಶಾರದಾ
ಧುನೋತು ಮೇ ಮನೋಮಲಂ ಮುನೀಂದ್ರನಂದಿನೀ ಸದಾ ॥

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾರದಗಸ್ತೆ
ಬಿಜಾಪುರ.

ಎಸ್. ಮೂಡಲಗಿರಿರಾಜು
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
c/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್ ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್.
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎನ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ. ಸಾರಂಗಪಾಣಿ. ರೋಜರ್ಸ್ ಕ್ಯಾಂಪ್
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

★

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಅತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

# ಗಂಗಾದೇವಿ

ಸನಾತನ ಧರ್ಮದಲ್ಲಿ ತೀರ್ಥಯಾತ್ರೆಗೆ ವಿಶೇಷವಾದ ಪ್ರಾತಿನಿಧ್ಯವನ್ನು ಕೊಡಲಾಗಿದೆ. ತೀರ್ಥಯಾತ್ರೆಗಳಿಂದ ಜೀವನದಲ್ಲಿ ಅನುಭವ ಉಂಟಾಗಿ ಸಂಕುಚಿತ ಮನೋಭಾವ ದೂರಾಗುತ್ತದೆ. "ನಹ್ಯಮ್ಮಯಾನಿ ತೀರ್ಥಾನಿ" ಎಂಬ ಭಾಗವತೋಕ್ತಿಯಂತೆ, ತೀರ್ಥ ಸ್ನಾನ, ದೇವಾಲಯಗಳಲ್ಲಿ ದೇವರ ದರ್ಶನಾದಿಗಳು, ಜ್ಞಾನಿಗಳಾದ ಸಾಧುವರೇಣ್ಯರ ದರ್ಶನ ಮಾತ್ರದಿಂದ, ನಮ್ಮನ್ನು ಪಾವನಗೊಳಿಸುತ್ತವೆ.

ಸಾಧುವರೇಣ್ಯರ ಸನ್ನಿಧಾನಗಳಿಂದ ತೀರ್ಥಗಳಲ್ಲಿ ಪಾವಿತ್ರ್ಯ ಉಂಟಾಗುತ್ತದೆ. ಅಂತೆಯೇ ತೀರ್ಥ-ಕ್ಷೇತ್ರಗಳಿಗೆ ಮಹತ್ವ ಕೊಡಲಾಗಿದೆ.

ಸನಾತನ ಧರ್ಮದಲ್ಲಿ ಗಂಗಾದರ್ಶನ ಮತ್ತು ಸ್ನಾನ ಪ್ರತಿಯೊಬ್ಬ ಭಾರತೀಯನ ಪವಿತ್ರಕರ್ತವ್ಯವೂ ಹೌದು. ಗಂಗೆಯು ದೇವಲೋಕದ ನದಿ. ಹಿಂದೊಮ್ಮೆ ಬಲಿ ಚಕ್ರವರ್ತಿಯು ನೀಡಿದ ದಾನವನ್ನು ಸ್ವೀಕರಿಸಲು, ತ್ರಿವಿಕ್ರಮರೂಪೀ ಪರಮಾತ್ಮನು ತನ್ನ ಪಾದಗಳನ್ನು ವಿಸ್ತರಿಸಿದಾಗ, ಹೆಬ್ಬೆರಳಿನ ಉಗುರಿನ ಸ್ಪರ್ಶದಿಂದ ಬ್ರಹ್ಮಾಂಡ ಕಟಾಹದ ಮೇಲ್ಭಾಗವು ಒಡೆದು, ಬ್ರಹ್ಮಾಂಡದಲ್ಲಿ ಜಲಧಾರೆಯು ಹರಿದು ಬಂದಿತು. ಈ ರೀತಿಯಾಗಿ ಹರಿದು ಬಂದ ನೀರು ತ್ರಿವಿಕ್ರಮರೂಪೀ ಪರಮಾತ್ಮನ ಪಾದಕಮಲಗಳನ್ನು ತೊಳೆದು ನಂತರ ಸತ್ಯ ಲೋಕಕ್ಕೆ ಹರಿದು ಬಂದಿತು.

ಸತ್ಯಲೋಕಕ್ಕೆ ಬಂದ ಜಲಧಾರೆಯನ್ನು ಸತ್ಯಲೋಕಾಧಿಪತಿಯಾದ ಚತುರ್ಮುಖ ಬ್ರಹ್ಮದೇವರು ತಮ್ಮ ಕಮಂಡಲದಲ್ಲಿ ತುಂಬಿಕೊಂಡು, ಶ್ರೀ ವಿಷ್ಣುವಿನ ಪಾದಾರವಿಂದಗಳಿಗೆ-ಅಭಿಷೇಕಗೈದರು. ಈ ಕಾರಣದಿಂದ ಗಂಗೆಗೆ "ವಿಷ್ಣುಪದಿ" ಎಂದು ಕರೆಯುವರು.

ಸತ್ಯಲೋಕದಲ್ಲಿ ಬ್ರಹ್ಮದೇವರು ಕಮಂಡಲದಲ್ಲಿ ಹಿಡಿದು ಬಿಟ್ಟ ಜಲಧಾರೆಯು ಆ ಲೋಕದಲ್ಲಿ "ವಿರಜಾ" ಎಂಬ ಹೆಸರಿನಿಂದ ಜನರನ್ನು ಪಾವನ ಮಾಡುತ್ತಿರುವಳು. ಅಲ್ಲಿಂದ ಮುಂದುವರಿದ ಗಂಗೆಯು, ತಪೋಲೋಕ, ಜನಲೋಕ, ಮಹರ್ಲೋಕ ಮತ್ತು ಸ್ವರ್ಗಲೋಕಗಳನ್ನು ಪಾವನಗೊಳಿಸಿ ಧ್ರುವಲೋಕದಲ್ಲಿಳಿದಳು. ನಂತರ ಸಪ್ತರ್ಷಿ ಮಂಡಲ, ಚಂದ್ರಮಂಡಲಗಳನ್ನು ತಣಿಸಿ, ಮೇರು ಪರ್ವತದ ತುದಿಯಲ್ಲಿರುವ ಬ್ರಹ್ಮಸದನದ ಸುತ್ತಲೂ ಹರಿಯುತ್ತಿರುವಳು. ಅಲ್ಲಿಂದ ನಾಲ್ಕು ಶಾಖೆಗಳಾಗಿ ನಾಲ್ಕು ದಿಕ್ಕಿಗೆ ಧುಮುಕಿದ ಗಂಗೆಯು 'ಸೀತಾ', 'ಚಕ್ಷು', 'ಭದ್ರಾ', ಮತ್ತು 'ಅಲಕನಂದಾ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವಳು. ದಕ್ಷಿಣದ ಶಾಖೆಯಾದ 'ಅಲಕನಂದಾ' ಕರ್ಮಭೂಮಿಯಾದ ಭಾರತದಲ್ಲಿ ಹರಿದು ಬಂದು, ಭಜಕರ ಪಾಪಗಳನ್ನೂ ತೊಳೆದು ಪುನೀತರನ್ನಾಗಿ ಮಾಡುತ್ತಿರುವಳು.

ಸ್ವರ್ಗದಲ್ಲಿ ಹರಿದು ಬಂದ ಕಾರಣ 'ಸ್ವರ್ನದಿ' ಎಂತಲೂ ಜನ್ಹು ಋಷಿಗಳ ಹೊಕ್ಕು ಹೊರಬಂದ ಕಾರಣ "ಜಾಹ್ನವಿ" ಎಂತಲೂ, ಭಗೀರಥನ ಪ್ರಯತ್ನದಿಂದ ಭೂಮಿಗೆ ಬಂದ ಕಾರಣ 'ಭಾಗೀರಥಿ' ಎಂದು ಕರೆಯಲ್ಪಡುತ್ತಿರುವಳು.

ಗಂಗಾನದಿಯ ದರ್ಶನ – ಸ್ನಾನಗಳ ಮಹತ್ತ್ವ ಕುರಿತಂತೆ ಹರಿದಾಸ ಪರಂಪರೆಯು ಮುಕ್ತಕಂಠದಿಂದ ಕೊಂಡಾಡಿದೆ. ಗಂಗಾ ನದಿಯ ದರ್ಶನಮಾತ್ರದಿಂದಲೇ ಜನ್ಮ - ಜನ್ಮಾಂತರದ ಪಾಪಗಳು ನಾಶವಾಗುವುವೆಂದು ಪುರಂದರದಾಸರು ತಮ್ಮ ಕೃತಿಗಳಲ್ಲಿ ಕೊಂಡಾಡಿದ್ದಾರೆ.

ದಿಟ್ಟಿಸಲು ಮೂನ್ನೂರು ಜನ್ಮದ
ಪಾತಕವು
ಈಂಟಿಸಲು ಮೂರು ಜನ್ಮಕೆ
ಮುಕುತಿಯು
ಮುಟ್ಟಿ ಮಾಡಿದರೊಂದು ಸ್ನಾನ
ಮಾತ್ರದಲಿ
ಸುಟ್ಟು ಪೋಪುವು ಸಹಸ್ರ ಜನ್ಮದ
ಪಾಪವು

ಗಂಗಾ ಸ್ನಾನ ಮಾಡಲು ಬಯಸಿ ಬರುವ ಮಾನವರು ಹೆಜ್ಜೆ, ಹೆಜ್ಜೆಗೂ, ಅಶ್ವಮೇಧಾದಿಯಾಗಗಳ ಫಲವನ್ನು ಹೊಂದುವರೆಂದು ಶ್ರೀಮದ್ಭಾಗವತದಲ್ಲಿ ವರ್ಣನೆಯು ಕಂಡು ಬರುತ್ತದೆ. ಗಂಗಾನದಿಯ ಸ್ಮರಣೆಯ ಮಹತ್ತ್ವವನ್ನು ವಿಜಯದಾಸರು "ಜಯ ಜಯತು ಜಾಹ್ನವಿಯೇ" ಎಂಬ ತಮ್ಮ ಕೃತಿಯಲ್ಲಿ,

ಅಲಕನಂದನೆ ನಿನ್ನ ಸ್ಮರಣೆ
ಮಾಡಿದ ಜನಕೆ
ಕುಲ ಕೋಟಿ ಪಾವನವು
ಸಂದೇಹವಿನಿತಿಲ್ಲ
ಸಲಿಲವನ್ನು ಸ್ಮರಿಸಿ ಮಜ್ಜನ
ಪಾನಮಾಡಲು
ಪೊಳೆವ ವೈಕುಂಠ ಪುರ
ಅವನಹೃದಯದಲ್ಲಿ

ಎಂದು ಸ್ಪಷ್ಟಪಡಿಸಿದ್ದಾರೆ.

ಕರ್ಕರಾಶಿಗೆ ಕರ್ಮ ಸಾಕ್ಷಿಯೆನಿಸುತಿಹ
ಅರ್ಕದೇವನು ಬಂದ ಸಮಯದಲಿ
ಶರ್ಕರಾಹ್ವರು ಸ್ನಾನಗೈಯೆ ದುರಿತಗಳ
ಸಂಪರ್ಕವಾಗದ ಕೇದಿ ಸಂಕ್ಷೈಪೆ
ದಯದಿ
ನಂದಿನೀ, ನಳಿನಿ, ಸುಸೀತಾ,
ಮಲಾಪಹ
ಕೆಂದ ಮಾತ್ರದಿ ಪುನೀತರನು ಮಾಳ್ಪ
ಸಂದರುಶನ ಸ್ಪರುಶನ ಸ್ನಾನಗಳ
ಫಲ ಪು
ರಂದರಾರ್ಯರೆ ಬಲ್ಲವರಲ್ಲರು
ಅರಿಯರು

ಸೂರ್ಯನು ಕರ್ಕರಾಶಿಗೆ ಬಂದಾಗ ಸ್ನಾನ ಮಾಡುವದರಿಂದ ಬರುವ ಫಲವನ್ನು ಜಗನ್ನಾಥದಾಸರು ತಮ್ಮ "ಜನನಿ ಜಾಹ್ನವಿ ಜಗತ್ರಯಪಾವನಿ ಪ್ರಣೀ ಕಾಮದೆ ಪದ್ಮಜಾಂಡ ಸಂಭೂತೆ" ಎಂಬ ಕೃತಿಯಲ್ಲಿ ಮೇಲಿನಂತೆ ಕೊಂಡಾಡಿದ್ದಾರೆ. 'ಗಂಗಾನದಿಯ' ಸ್ನಾನಾದಿಗಳ ನಿಜವಾ

ಶ್ರೀಹನುಮಂತಾಚಾರ್ಯ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ವಿಶಾಖ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | ,, | 40-00 |
| 3. | ಪುಳಿಯೋಗರೆ | ,, | 50-00 |
| 4. | ಪೊಂಗಲಂ | ,, | 55-00 |
| 5. | ಸಕ್ಕರಪೊಂಗಲ್ | ,, | 55-00 |
| 6. | ಶಾಕರ ಭಾತ್ | ,, | 85-00 |
| 7. | ಕೇಸರೀ ಭಾತ್ | ,, | 90-00 |
| 8. | ಸೀರ | ,, | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಮಹಿಮೆಯನ್ನು ಪುರಂದರದಾಸರಂತಹ ಮಹಾಮಹಿಮರು ಅರಿಯಲು ಸಾಧ್ಯವೆಂಬುದು ಶ್ರೀ ಜಗನ್ನಾಥದಾಸರ ಅಭಿಪ್ರಾಯವಾಗಿದೆ.

ಕಾಶಿಯಲ್ಲಿ, ಗಂಗಾನದಿಯ ದಂಡೆಯ ಮೇಲೆ, ಎತ್ತು, ಹಕ್ಕಿ, ಕುದರೆ, ಹಾವು, ಆನೆ, ಅಥವಾ ಏನಾದರೊಂದು ಪ್ರಾಣಿಯಾಗಿರುವುದು, ರಾಜ ವೈಭೋಗಗಳಿಗಿಂತಲೂ ಮಿಗಿಲಾದುದೆಂದು ವಾಲ್ಮೀಕಿ ಮುನಿಗಳು ತಮ್ಮ 'ಗಂಗಾಷ್ಟಕ' ಎಂಬ ಕೃತಿಯಲ್ಲಿ ವರ್ಣಿಸಿದ್ದಾರೆ.

ಮರಣಕಾಲದಲ್ಲಿ 'ಗಂಗಾ' ಜಲವು ಬಾಯಿಯಲ್ಲಿ ಬೀಳುವುದು ಸದ್ಗತಿಗೆ ಕಾರಣವಾಗುವದೆಂಬ ನಂಬಿಕೆ ನಮ್ಮ ಹಿಂದೂ ಧರ್ಮದಲ್ಲಿದೆ. ಈ ಪ್ರಸಂಗಕ್ಕಾಗಿಯೇ ಗಂಗಾ ಜಲವನ್ನು ಶೇಖರಿಸಿ ಇಟ್ಟುಕೊಳ್ಳುವ ಪದ್ಧತಿಯು ನಮ್ಮಲ್ಲಿ ವಿಪುಲವಾಗಿ ಕಂಡು ಬರುತ್ತದೆ. ಅಶಕ್ತರಾದವರು ಶುದ್ಧ ಮನಸ್ಸಿನಿಂದ "ಗಂಗಾ-ಗಂಗಾ" ಎಂಬ ಸ್ಮರಣೆ ಮಾತ್ರದಿಂದ ಸದ್ಗತಿ ಹೊಂದುವರು. ಇಂತಹ ಗಂಗಾದೇವಿಯನ್ನು ಬ್ರಹ್ಮ ಕಮಂಡಲದಲ್ಲಿ ಹೊಂದಿ ಧನ್ಯರಾದರೆ, ಮಹರುದ್ರದೇವರು ತಮ್ಮ ಶಿರದಲ್ಲಿ ಧರಿಸಿ ಧನ್ಯರಾಗಿದ್ದಾರೆ ಅಂತೆಯೇ ಮಹರುದ್ರದೇವರಿಗೆ "ಗಂಗಾಧರ"ನೆಂದು ಭಕ್ತಿ-ಭಾವಗಳಿಂದ ಭಜಿಸುತ್ತಾರೆ. ಭಗೀರಥನ ಪ್ರಯತ್ನದಿಂದ ಧರೆಗಳಿದ "ಭಾಗೀರಥಿಯು" ಈತನ ಪೂರ್ವಜರಿಗೆ ಸದ್ಗತಿಯನ್ನು ಕರುಣಿಸಿದ್ದಾಳೆ.

ಲೋಕಗಳು ಕರ್ಮಾನುಸಾರವಾಗಿ ಫಲಗಳನ್ನು ಭೋಗಿಸುವುದಕ್ಕೆ ಮೀಸಲಾಗಿವೆ. ಅಂಗ ಶರೀರದಲ್ಲಿ ಬೀಜರೂಪವಾಗಿರುವ ಕರ್ಮಗಳನ್ನು ತೊಳೆಯಲು ಭರತ ಭೂಮಿಯಲ್ಲಿ ಜನ್ಮವೆತ್ತಿ ಬರಬೇಕು. ಭಗವಂತನ ಅವತಾರ ಕಾರ್ಯಗಳು ನಡೆಯುವುದು ಭರತ ಭೂಮಿಯಲ್ಲಿಯೇ. ಗಂಗಾದಿ ಪುಣ್ಯನದಿಗಳು ಪ್ರಯಾಗದಂತಹ ಪರಮ ಪವಿತ್ರ ಪುಣ್ಯ ಕ್ಷೇತ್ರಗಳು ಇರುವದು ಇಲ್ಲಿಯೇ. ಅಂತೆಯೇ ಭಾರತ ಭೂಮಿಯಲ್ಲಿ ಮಾಡುವ ಆಚಾರ ವಿಚಾರಗಳಿಗೆ ಬೆಲೆಯುಂಟು.

---

(19 ನೇ ಪುಟದಿಂದ)

ವೈಜಯನ್ತಿಯೂ ಆದ ಗಂಗಾಮಾಲೆಯನ್ನು ಭವನಾಳಿಸ್ಥಿತ ಮಾಣಿಕ್ಯಮಾಲೆ ಎಂದು ವರ್ಣಿಸುತ್ತ ಹೀಗೆ ಬರೆದಿದ್ದಾರೆ-

ಬ್ರಹ್ಮಾಂಡಂ ಖಂಡಯಂತೀ ಹರಶಿರಸಿ
ಜಟಾವಲ್ಲೀ ಮುಲ್ಲಾಸಯಂತೀ
ಸ್ವರ್ಲೋಕಾ ದಾಪತಂತೀ
ಕನಕಗಿರಿಗುಹಾಗಂಡಶೈಲಾತ್ ಸ್ಖಲಂತೀ
ಕ್ಷೋಣೀಪೃಷ್ಠೇ ಲುಠನ್ತೀ
ದುರಿತಚಯ ಚಮೂರ್ನಿರ್ಭರಂ
ಭರ್ತ್ಸಯಂತೀ
ಪಾಥೋಧಿಂ ಪೂರಯನ್ತೀ
ಸುರನಗರ ಸರಿತ್ಪಾವನೀ ನಃ ಪುನಾತು

ತನ್ನ ಲಲಿತತರತರಂಗಾವಳಿಗಳಿಂದ ಹಗಲಿರುಳೂ ಗಾನ ಮಾಡುತ್ತಿರುವ ಗಂಗೆಯನ್ನು ಭಗತ್ಪಾದರು ಮೂರು ರೂಪಗಳಲ್ಲಿ ಕಂಡಿದ್ದಾರೆ-

ಆದಾ ವಾದಿಪಿತಾಮಹಸ್ಯ
ನಿಯಮವ್ಯಾಪಾರಪಾತ್ರೇ ಜಲಂ
ಪಶ್ಚಾತ್ ಪನ್ನಗಶಾಯಿನೋ
ಭಗವತಃ ಪಾದೋದಕಂ ಪಾವನಂ।
ಭೂಯಃ ಶಂಭುಜಟಾವಿಭೂಷಣಮಣಿ
ರ್ಜಹ್ನೋರ್ಮಹರ್ಷೇರಿಯಂ
ಕನ್ಯಾ ಕಲ್ಮಷನಾಶಿನೀ
ಭಗವತೀ ಭಾಗೀರಥೀ ದೃಶ್ಯತೇ॥

ಜಹ್ನು ಮುನಿಕನ್ಯೆಯಾದ ಅಘನಾಶಿನಿ ಭಾಗೀರಥಿ ಮೊದಲು ಬ್ರಹ್ಮದೇವನ ಕಮಂಡಲದಲ್ಲಿಳು. ನಂತರ ಪಣಿಶಾಯಿ ಪದ್ಮನಾಭನ ಪವಿತ್ರಪಾದೋದ್ಭವೆಯಾದಳು ನಂತರ ಭಗವದಿಂದುಮೌಳಿಯ ಜಟಾಜೂಟಸಂಶೋಭಿತ ಮಾಣಿಕ್ಯ ದೀಧಿತಿಯಾದಳು. ದಿವಿಜನದಿಯ ಈ ಮೂರು ರೂಪಗಳೂ ಭಾರತೀಯರಿಗೆ ಪೂಜ್ಯವಾಗಿವೆ.

ಭಾರತೀಯರ ದೃಷ್ಟಿಯಲ್ಲಿ ಗಂಗೆ-ಮಾತೆ. ಆಕೆಯ ಪುಣ್ಯ ಪೀಯೂಷ ಸ್ತನ್ಯ ಧಾರೆಯಿಂದ ಪುಷ್ಟವಾದ ಭಾರತೀಯ ಸಂಸ್ಕೃತಿಯಲ್ಲಿ ಗಂಗೆ ಹಾಸುಹೊಕ್ಕಾಗಿದ್ದಾಳೆ.



ಯುವವಾಣಿ

# ಧರ್ಮದ ಬಗ್ಗೆ ಕೆಲ ವಿಚಾರಗಳು

ಮನುಷ್ಯ ಜನ್ಮವು ಇತರೆ ಜನ್ಮಗಳಿಗಿಂತ ಶ್ರೇಷ್ಠವಾದದ್ದೆಂದು ನಮಗೆ ತಿಳಿದಿದೆ. ಏಕೆಂದರೆ ಮಾನವನು ಎಲ್ಲರಿಗೂ ಒಳ್ಳೆಯದನ್ನು ಮಾಡುವ ಚೈತನ್ಯವನ್ನು ಪಡೆದಿದ್ದಾನೆ. ಅದರಂತೆ ತನ್ನೊಳಗಿನ ಉತ್ತಮ ಗುಣಸಾಮರ್ಥ್ಯಗಳನ್ನು ಗುರುತಿಸಿ, ಪ್ರಪಂಚದ ಎಲ್ಲಜೀವಿಗಳಿಗೆ ಒಳ್ಳೆಯದನ್ನು ಬಯಸಿ, ಆ ಬಗ್ಗೆ ಕಾರ್ಯಪ್ರವೃತ್ತನಾದರೆ ಮನುಷ್ಯ ಜನ್ಮವು ಸಾರ್ಥಕವಾಗುತ್ತದೆ. ಇಲ್ಲದಿದ್ದಲ್ಲಿ ಮನುಷ್ಯಜನ್ಮವು ನಾಮಮಾತ್ರ ಶ್ರೇಷ್ಠವೆಂದು ಕರೆಯಲ್ಪಡುವುದೇ ಹೊರತು ನಿಜವಾದ ಅರ್ಥದಲ್ಲಿ ಅಲ್ಲ. ಹೀಗೆ ಒಳಿತನನ್ನು ಬಯಸಿ ಕೆಲಸ ಮಾಡದಿದ್ದಲ್ಲಿ ಮನುಷ್ಯನಿಗೂ ಪಶುವಿಗೂ ಹೆಚ್ಚು ವ್ಯತ್ಯಾಸ ಕಾಣಲಾರದು. ಜನ್ಮ ಸಾರ್ಥಕ್ಯ ಹೊಂದಲು ಮೊದಲಿಗೆ ಮನುಷ್ಯ ತನ್ನ ಜೀವನ ಧರ್ಮ ಮತ್ತು ವಿಶ್ವಧರ್ಮವನ್ನು ಅರಿಯ ಬೇಕಾದುದು ಆವಶ್ಯಕ.

ಧರ್ಮ ಎಂದರೆ ಸಾಮಾನ್ಯ ಅರ್ಥದಲ್ಲಿ ನ್ಯಾಯಯುತ ನಡವಳಿಕೆ ಮತ್ತು ಸಮಾಜದಲ್ಲಿ ಶಾಂತಿ ಸೌಹಾರ್ದತೆಗಳನ್ನು ಕಾಪಾಡುವ ನೀತಿಯುತ ಜೀವನ ವಿಧಾನ. ಶ್ರೇಷ್ಠ ಜೀವನ ನಡೆಸುವಲ್ಲಿ ಬೇಕಾಗುವ ಸಾರ ಸರ್ವಸ್ವವೇ ಧರ್ಮ. ಡಾ॥ ಬೇಂದ್ರೆಯವರು ತಿಳಿಸಿರುವಂತೆ, "ಧರ್ಮ ತೋರಿಸಲಿಕ್ಕೆ ಬರುವುದಿಲ್ಲ. ಅದಕ್ಕೆ ದೃಶ್ಯ ವಸ್ತುರೂಪವಿಲ್ಲ, ಅದೊಂದು ತಿಳಿವಳಿಕೆ ಮಾತ್ರ. ಜೀವನಕ್ಕೆ ಎಚ್ಚರಿಕೆ ಕೊಡುವುದು ಧರ್ಮ''. ಜನ್ಮ ಶ್ರೇಷ್ಠತೆಯ ಸಾಧನೆಗೆ ಮಾರ್ಗದರ್ಶಿ ಧರ್ಮವಾಗುತ್ತದೆ. ಇದಕ್ಕಾಗಿ ಮನಷ್ಯ ತನ್ನ ಸ್ವ-ಭಾವ, ಸ್ವ-ಧರ್ಮ ಮತ್ತು ಸ್ವ-ರೂಪವನ್ನು ತಿಳಿದು ಕೊಳ್ಳಬೇಕಾಗುತ್ತದ. ನಾವು ನಡೆಸುವ ಜೀವನದ ಪರಿಣಾಮ. ಕೊನೆಯಲ್ಲಿ ಎರಡು ಮಾತ್ರ, ಪಾಪ – ಪುಣ್ಯ. ಪುಣ್ಯ ಸಂಪಾದನೆಯ ಮಾರ್ಗವೇ ಧರ್ಮ.

ಗಾಂಧೀಜಿಯ ಪ್ರಕಾರ ಧರ್ಮವು ವ್ಯಕ್ತಿಯ ಸ್ವಾತಂತ್ರ್ಯವನ್ನು ಮತ್ತು ಬೆಳವಣಿಗೆಯನ್ನು ತಿಳಿಸಬೇಕೇ ಹೊರತು ಕಂದಾಚಾರಕ್ಕೆ ಅರ್ಥವಿಲ್ಲದೆ ಅಡಿಯಾಳುತನ ಮಾಡಿಕೊಳ್ಳುವುದನ್ನಲ್ಲ. ಅದರಂತೆ ಪ್ರತಿಧರ್ಮ ಬೋಧನೆಯಲ್ಲೂ ನಾವು ಸಾಮ್ಯವನ್ನು ಹಾಗೂ ಆಚರಣೆಗೆ ಅಗತ್ಯವಾದ ಕೆಲವು ಮೌಲ್ಯಗಳನ್ನು ಕಾಣುತ್ತೇವೆ. ಈ ಮೌಲ್ಯಗಳು ಧರ್ಮದೊಂದಿಗೆ ಆಚರಣೆಯಲ್ಲಿ ಬಂದಾಗ ಮಾತ್ರ ಜೀವನ ಸಾರ್ಥಕ್ಯವನ್ನು ಹೊಂದಬಹುದಾಗಿರುತ್ತದೆ.

## ಪ್ರೇಮ

ಸಾಮಾನ್ಯವಾಗಿ ವಿಶ್ವದ ಎಲ್ಲಾ ಧರ್ಮಗಳು ಪ್ರೀತಿ ಅಥವಾ ಪ್ರೇಮಕ್ಕೆ ಒತ್ತು ಕೊಟ್ಟಿರುವುದನ್ನು ಹಾಗೂ ಕ್ಷಮೆ ಯೊಂದಿಗೆ ಹೊಂದಾಣಿಕೆ ಮಾಡಿಕೊಂಡಿರುವುದನ್ನು ಕಾಣುತ್ತೇವೆ. 'ನಿನ್ನಂತೆಯೇ ನಿನ್ನ ನೆರೆಯವನನ್ನು ಪ್ರೀತಿಸು; ಕ್ಷಮೆಯೇ ಉತ್ತಮ ಶಿಕ್ಷೆ' ಎಂಬುವುವು ಎಲ್ಲರೂ ಒಪ್ಪಿದ ಮಾತುಗಳು. ಇದೇ ರೀತಿ 'ಲಲಿತ ವಿಸ್ತಾರ'ದಲ್ಲಿ ಬುದ್ಧನು,'ಪ್ರೀತಿಯು ಮಾತ್ರ ಕೋಪವನ್ನು ಗೆಲ್ಲುತ್ತದೆ; ಒಳ್ಳೆಯ ಪ್ರೀತಿಯಿಂದ ನಾವು ಕೆಟ್ಟದ್ದನ್ನು ಗೆಲ್ಲಬಹುದು' ಎನ್ನುತ್ತಾನೆ. 'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ಮಾಸ್ತಿಯವರು "ತಂದೆ ಈ ಲೋಕವಲ್ಲಿ ತಪ್ಪುಮಾಡದ ಮನುಜ ಒಬ್ಬನೂ ಇಲ್ಲ. ಎಲ್ಲರ ಕುರಿತು, ಕರುಣೆಯೇ ಯುಕ್ತವರ್ತನ'' ಎಂದು ಸೀತೆಯ ಬಾಯಿಂದ ಹೇಳಿಸುತ್ತಾರೆ. "ಪ್ರೇಮವಿದ್ದಲ್ಲಿ ಭಯವಿಲ್ಲ''. ಪ್ರೇಮವು ಸತ್ಯದೊಂದಿಗೆ ಮಾತ್ರ ಸಂತೋಷವಾಗಿರುತ್ತದೆ; ಏನೆಲ್ಲ ಸಹಿಸುತ್ತದೆ; ಏನೆಲ್ಲ ಮನ್ನಿಸುತ್ತದೆ. ಅದು ನಿಷ್ಫಲವಲ್ಲ– ಆಶಾಜ್ಯೋತಿ ಎನ್ನುತ್ತಾರೆ ಗಾಂಧೀಜಿ. ಆದ್ದರಿಂದ ಪ್ರೇಮ ಮತ್ತು ಕರುಣೆ ಧರ್ಮದ ಮೊದಲ ಸಾಧನವಾಗಬೇಕು.

## ಸತ್ಯ

ಸತ್ಯಕ್ಕಿಂತ ಮಿಗಿಲಾದ ಧರ್ಮವಿಲ್ಲ, ಧರ್ಮದ ಮುಖ್ಯ ಉದ್ದೇಶ ಸತ್ಯ ಶೋಧನೆ. ಸತ್ಯಕ್ಕೂ ಧರ್ಮಕ್ಕೂ ಎಡೆಬಿಡದನಂಟು. ಸತ್ಯ ಮತ್ತು ಧರ್ಮಗಳು ಮಾತ್ರ ಶಾಶ್ವತವಾದದ್ದೆಂದು ಎಲ್ಲ ಧರ್ಮಗಳು ಸಾರಿವೆ. ಸತ್ಯದ ಮಾರ್ಗ ದೂರವಾದದ್ದು. ಸತ್ಯವನ್ನು ಕಾಣುವ ವಿಧಾನವು ನಿಧಾನವಾದದ್ದು ಮತ್ತು ಕ್ಲಿಷ್ಟವಾದದ್ದು. ಆದ್ದರಿಂದಲೇ ಅದಕ್ಕೆ ಮೌಲ್ಯ ಹೆಚ್ಚು. 'ಸತ್ಯಮೇವ ಜಯತೆ, ನ ಅನೃತಂ' ಎಂದು ನಮ್ಮ ಸಂಸ್ಕೃತಿಯು ಸಾರಿದೆ. ಸತ್ಯವು ಮಾತ್ರ ಗೆಲ್ಲುತ್ತದೆ, ಅಸತ್ಯವು ಎಂದಿಗೂ ಅಲ್ಲ ಎಂಬುದು ಇದರ ಅರ್ಥ.

ತೈತ್ತಿರೀಯೋಪನಿಷತ್ತಿನಲ್ಲಿ ತಿಳಿಸಿದಂತೆ ನಮ್ಮ ಪ್ರತಿನಿತ್ಯದ ಕಾರ್ಯಾಚರಣೆ "ಸತ್ಯಂ ವದ–ಧರ್ಮಂ ಚರ'' ಆಗಬೇಕು.

## ಅಹಿಂಸೆ

"ಅಹಿಂಸಾ ಪರಮೋ ಧರ್ಮಃ'' ಎಂದು ಘೋಷಿಸಿದೆ ಭಾರತೀಯ ಸಂಸ್ಕೃತಿ. ಜಗತ್ತಿನ ಎಲ್ಲ ಧರ್ಮಗಳು ಅಹಿಂಸೆಗೆ ಪ್ರಾಧಾನ್ಯ ನೀಡಿವೆ. ಮಹಾತ್ಮರು ಅಹಿಂಸೆಯನ್ನು ಧರ್ಮಸಾಧನವೆಂದಿದ್ದಾರೆ. ಆದ್ದರಿಂದ ಈ ಘೋಷಣೆಯನ್ನು ಎಷ್ಟರ ಮಟ್ಟಿಗೆ ಆಚರಣೆಯಲ್ಲಿ ತಂದಿದ್ದೇವೆನ್ನುವುದನ್ನು ವಿವೇಚಿಸುವ ಅಗತ್ಯ ಇಂದು ಹೆಚ್ಚಾಗಿದೆ; ದ್ವೇಷ ಭಾವನೆಯಿಂದ ಕೂಡಿದ ಕಠಿಣವಾತು ಸಹ ಹಿಂಸಾರೂಪವೆನ್ನುವುದನ್ನು ಅರಿಯಬೇಕು.

## ನಿಷ್ಕಾಮಕರ್ಮ

ಪಾಪಪುಣ್ಯಗಳನ್ನು ನಿಶ್ಚಯಿಸುವ ಕರ್ಮ ಸಿದ್ಧಾಂತವು ಬಹಳ ಮುಖ್ಯವಾದುದು.

**ಶ್ರೀ ಎನ್. ಆರ್. ಸುಬ್ಬರಾವ್**

ಕರ್ಮದ ಆಧಾರದ ಮೇಲೆಯೇ ಪುನರ್ಜನ್ಮ ಸಂಭವವೆಂದು ನಂಬಲಾಗಿದೆ. ನಮ್ಮ ಕೆಲಸ ಅಥವಾ ಕರ್ಮಕ್ಕೆ ತಕ್ಕಂತೆ ಫಲಿತಾಂಶ ದೊರೆಯುವುದೆಂಬ ಸಿದ್ಧಾಂತವಿದೆ. ಫಲಿತಾಂಶವು ಜಾಗ್ರತೆ ದೊರೆಯಬಹುದು ಅಥವಾ ತಡವಾಗಿ ದೊರೆಯಬಹುದು. "ಮಾಡಿದ್ದುಣ್ಣೋ ಮಹಾರಾಯ" ಎಂಬ ಉಕ್ತಿಯಂತೆ ಮನುಷ್ಯ ತಾನು ಬಿತ್ತಿದ್ದನ್ನು ಪಡೆಯಬೇಕಾಗುತ್ತದೆ. ಆದ್ದರಿಂದ ಧರ್ಮಶಾಸ್ತ್ರಗಳು ನಿಷ್ಕಾಮ ಕರ್ಮ, ಸೇವೆ, ತ್ಯಾಗ ಮತ್ತು ಕ್ರಿಯಾತ್ಮಕತೆಗಳಲ್ಲಿ ಮನುಷ್ಯ ತನ್ನನ್ನು ತೊಡಗಿಸಿಕೊಂಡು "ಧರ್ಮಸಂಗ್ರಹ" ಮಾಡಬೇಕೆಂದು ಹೇಳುತ್ತವೆ,ಮತ್ತು ಆಲಸ್ಯವನ್ನು ಹೊಡೆದೋಡಿಸಿ ತಪಸ್ಸು ಅಥವಾ ಏಕಾಗ್ರತೆಯಿಂದ ಕರ್ಮಸಾಧನೆಯಲ್ಲಿ ನಿರತನಾಗಬೇಕೆಂದು ತಿಳಿಸುತ್ತವೆ. ಏಕೆಂದರೆ ಪ್ರತಿಯೊಬ್ಬರಿಗೂ ಧರ್ಮಾಚರಣೆಯ ಋಣಭಾರವಿದೆ. ಉದಾ: ಪಿತೃಧರ್ಮ, ಮಾತೃಧರ್ಮ, ಆಚಾರ್ಯಧರ್ಮ, ಶಿಷ್ಯಧರ್ಮ, ರಾಜಧರ್ಮ, ಪ್ರಜಾಧರ್ಮ. ಹೀಗೆ ಅಂದರೆ ಪ್ರತಿಯೊಬ್ಬರೂ ತಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸಬೇಕೆಂದರ್ಥ. ಧರ್ಮವಿಲ್ಲದೆ ಯಾವುದೇ ಫಲಕ್ಕೆ ಶ್ರೇಯಸ್ಸು ಬರುವುದಿಲ್ಲ. ಧರ್ಮವು ಅಮರತ್ವಕ್ಕೆ ಮಾರ್ಗ, ಜೀವನಸಾರ್ಥಕ್ಯ ಹಾಗೂ ಸಮೃದ್ಧ ಜೀವನಕ್ಕಾಗಿ ಧರ್ಮಾಚರಣೆ ಅಗತ್ಯ. ಆದ್ದರಿಂದ ಮನುಷ್ಯ ಪುರುಷಾರ್ಥಗಳ ಸಾಧನೆಯಲ್ಲಿ ಧರ್ಮವನ್ನು ಅಳವಡಿಸಿಕೊಳ್ಳಬೇಕು. 'ಯೋಗಃ ಕರ್ಮಸು ಕೌಶಲಂ' ಎಂದು ಗೀತೆಯಲ್ಲಿ ತಿಳಿಸಿರುವಂತೆ ಕೆಲಸದಲ್ಲಿನ ದಕ್ಷತೆಯೇ ಯೋಗ. ಅಂದರೆ ನಮ್ಮ ಕರ್ತವ್ಯ ಅಥವಾ ಕರ್ಮವನ್ನು ಬಿಡಬಾರದು; ಅದರಿಂದ ಬರುವ ಫಲದ ಆಸೆಯನ್ನು ಬಿಡಬೇಕು.

ಧರ್ಮ ಕರ್ಮಗಳ ಸಮನ್ವಯದ ಬಗ್ಗೆ ತಿಳಿಯಲು ರಾಮಾಯಣದಂತಹ ಆದರ್ಶ ಕಾವ್ಯದಲ್ಲಿ ವಿಪುಲ ಅವಕಾಶವಿದೆ. ಧರ್ಮದಿಂದ ಸುಖ, ಶಾಂತಿ, ಸಂಪತ್ತು ಮತ್ತು ಆನಂದ ಲಭ್ಯವಾಗುವುದೆಂದು ರಾಮಾಯಣ ತಿಳಿಸುತ್ತದೆ.

"ಮನುಷ್ಯ ಆಯುಸ್ಸನ್ನು ಎಲ್ಲಿ ಬೇಕಾದರೂ ಕಳೆಯಬಹುದು. ಆದಕ್ಕೆ ಅವನು ಕಷ್ಟಪಡಬೇಕಾಗಿಲ್ಲ, ಕಷ್ಟವಿರುವುದೆಲ್ಲಾ ಸರಿಯಾದ ದಾರಿಯನ್ನು ಹುಡುಕುವುದರಲ್ಲಿ, ಬಹಳ ಕಷ್ಟದ ದಾರಿಯೇ ಉತ್ತಮ. ಸತ್ತ್ವವೇ ಸಿದ್ಧಿಯ ಮೂಲ" – ಇದು 'ಸುಬ್ಬಣ್ಣ' ಕಾದಂಬರಿಯಲ್ಲಿ ಮಾಸ್ತಿಯವರ ಧರ್ಮ ಮಾರ್ಗದ ವಿವರಣೆ.

ನಮ್ಮ ಕರ್ತವ್ಯ ಪಾಲನೆಯಿಂದ ನಮಗೇ ನಾವು ಉಪಕಾರ ಮಾಡಿಕೊಂಡಂತೆ. ಸೇವೆಯನ್ನು ಒಂದು ಪೂಜೆಯೆಂದು ಮಾಡಬೇಕು ಇದರಿಂದ ಮನಸ್ಸು ಪರಿಶುದ್ಧವಾಗುತ್ತದೆ. ಎಷ್ಟರ ಮಟ್ಟಿಗೆ ನಾವು ಇತರರ ಸುಖಕ್ಕಾಗಿ ಶ್ರಮಿಸುತ್ತೇವೋ ಅಷ್ಟರ ಮಟ್ಟಿಗೆ ನಾವು ದೊಡ್ಡವರಾದಂತೆ. ಏಕೆಂದರೆ ಕೊನೆಯಲ್ಲಿ ನಿಲ್ಲುವುದು ನಾವು ಮಾಡಿದ ಸತ್ಕಾರ್ಯ ಅಥವಾ ಕೃತಿಮಾತ್ರ. ಇಂದಿನ ಮುಖಂಡರು ಇದನ್ನು ಚೆನ್ನಾಗಿ ಅರಿಯುವ ಅಗತ್ಯವಿದೆ. ಮನುಷ್ಯ ತನ್ನ ಕೃತ್ರಿಮ ಜೀವನವನ್ನು ಸಾಕು ಮಾಡಿ, ಮನಸ್ಸು ವಿಕಲ್ಪಗೊಳ್ಳದಂತೆ ಸಂಕಲ್ಪಶಕ್ತಿಯನ್ನು ಬೆಳೆಸಿಕೊಂಡು ಓಜಸ್ಸು ಮತ್ತು ತೇಜಸ್ಸನ್ನು ರೂಡಿಸಿಕೊಳ್ಳಬೇಕಾಗಿದೆ; ನೈಜ ಮಾನವನಂತೆ ಬದುಕುವುದನ್ನು ಕಲಿಯಬೇಕಿದೆ. ಅಂತೆಯೇ ತನ್ನ ಕರ್ಮದಿಂದ ಬಂದ ಸಂಪಾದನೆಯಲ್ಲಿ ಸ್ವಲ್ಪಂಶವನ್ನು ದಾನಮಾಡಲು ಎಲ್ಲ ಧರ್ಮಗಳು ತಿಳಿಸುತ್ತವೆ. ಯೋಗ್ಯರಿಗೆ ದಾನಮಾಡಿದಲ್ಲಿ ಅವರಲ್ಲಿ ಉಂಟಾಗುವ ತೃಪ್ತಿ ಸಂತೋಷಗಳು ಕೊಟ್ಟವನಿಗೆ ಶ್ರೇಯಸ್ಸನ್ನುಂಟು ಮಾಡುತ್ತವೆ. ಆದ್ದರಿಂದಲೇ ಧರ್ಮಕರ್ಮ ಸಮನ್ವಯದಿಂದ ಮಾಡಿದ ದಾನವು ಶ್ರೇಷ್ಠವಾದುದೆಂದು ಹೇಳಲಾಗಿದೆ. ಈರೀತಿ 'ಶರೀರ ಮಾದ್ಯಂ ಖಲು ಧರ್ಮಸಾಧನಂ' ಎಂಬಂತೆ ಮನುಷ್ಯ ತನ್ನ ಶರೀರವನ್ನು ಧರ್ಮಸಾಧನವನ್ನಾಗಿ ಬಳಸಿಕೊಳ್ಳಬೇಕು.

## ನಂಬಿಕೆ

ಗೌತಮ ಬುದ್ಧ ತನ್ನ ಶಿಷ್ಯರಿಗೆ 'ನಂಬಿಕೆ ಇದ್ದವ ಹೆಚ್ಚು ಸುಖಪಡೆಯುತ್ತಾನೆ' ಎನ್ನುತ್ತಾನೆ. "ನಂಬಿಕೆಟ್ಟವರಿಲ್ಲವೋ ಹರಿ ನಿನ್ನ" ಎಂದಿದ್ದಾರೆ ದಾಸಶ್ರೇಷ್ಠ ಪುರಂದರದಾಸರು. ನಂಬಿಕೆ ಮನುಷ್ಯನಲ್ಲಿ ವಿಶ್ವಾಸವನ್ನು ಮೂಡಿಸುತ್ತದೆ. ಇಲ್ಲದಿದ್ದಲ್ಲಿ 'ಸಂಶಯಾತ್ಮಾ ವಿನಶ್ಯತಿ' ಎಂಬಂತೆ ಸಂಶಯ ಹೊಂದಿದವನು ವಿನಾಶಹೊಂದುತ್ತಾನೆ. ಭಗವದ್ಗೀತೆಯು ಮನುಷ್ಯನ ಮಾನಸಿಕ ಆರೋಗ್ಯಕ್ಕೆ ಮತ್ತು ಮಾನಸಿಕ ಗೊಂದಲಗಳ ಬಿಡುಗಡೆಗೆ ಔಷಧಿಯಾಗಿದೆಯೆಂದು ಇತ್ತೀಚೆಗೆ ಕೆಲವರು ಸಂಶೋಧಕರು ತಿಳಿಸಿದ್ದಾರೆ. ಜ್ಞಾನದಿಂದ ತನ್ನನ್ನು ಮತ್ತು ವಿಶ್ವಚೇತನವನ್ನು ಅರಿಯಬಹುದೆಂದೂ, ನಿಷ್ಕಾಮ ಕರ್ಮದಿಂದ ಯೋಗ್ಯತೆಯನ್ನು ಮತ್ತು ಭಕ್ತಿ ಅಥವಾ ನಂಬಿಕೆಯಿಂದ ಆತ್ಮ ವಿಶ್ವಾಸವನ್ನು ಹೊಂದಬಹುದೆಂದು ತಿಳಿಸಿದ್ದಾರೆ

## ಶೀಲ

ಭರ್ತೃಹರಿಯು, ಎಲ್ಲಜನರಿಗೆ ಎಲ್ಲಗುಣಗಳಿಗಿಂತ ಶೀಲವೇ ಶ್ರೇಷ್ಠವಾದ ಭೂಷಣವೆಂದು ತಿಳಿಸಿದ್ದಾನೆ. ಶೂದ್ರಕನ ಮೃಚ್ಛಕಟಿಕದಲ್ಲಿ ಚಾರುದತ್ತ ಹೇಳುವುದೂ ಇದನ್ನೇ "ನಾನು ಮರಣಕ್ಕೆ ಅಂಜುವುದಿಲ್ಲ. ಆದರೆ ಚಾರಿತ್ರ್ಯ ಹೀನತೆ ಮತ್ತು ಕಳಂಕಗಳಿಗೆ ಮಾತ್ರ". ಇದಕ್ಕಾಗಿ ಮನುಷ್ಯ ತಾನುದೇಹ ಪೋಷಣೆಮಾಡಿದಂತೆ ಆತ್ಮ ಪೋಷಣೆಯನ್ನೂ ಮಾಡ ಬೇಕು. ಆಧ್ಯಾತ್ಮ ಬೇಸಾಯದಿಂದ ಸಂಸ್ಕಾರ ಎಂಬ ಫಲದೊರೆಯುತ್ತದೆ.

## ಜ್ಞಾನ

ನ ಹಿ ಜ್ಞಾನೇನ ಸದೃಶಂ – ಜ್ಞಾನದ ಮೂಲಕ ಧರ್ಮ ಸೂಕ್ಷ್ಮಗಳನ್ನು ಅರಿಯಬೇಕಿದೆ. ಒಮ್ಮೆ ಚರಕ ಮಹಾಋಷಿ ತನ್ನ ಶಿಷ್ಯ ಅಗ್ನಿವೇಶನಿಗೆ ಹೀಗೆಂದು ಹೇಳುತ್ತಾನೆ "ಪ್ರಪಂಚದಲ್ಲಿ ಮಹಾನಾಶವಾಗುತ್ತದೆ. ನೀರು, ಗಾಳಿ, ನೆಲ, ಆಕಾಶ (ಪರಿಸರ) ಕೆಡುತ್ತವೆ. ಕಾಳು ಕಡ್ಡಿಗಳಲ್ಲಿ ಶಕ್ತಿ ಕಡಿಮೆಯಾಗುತ್ತದೆ. ಔಷಧಿ ಪ್ರಭಾವ ಕಳೆದುಕೊಳ್ಳುತ್ತದೆ. ಜನ ಧರ್ಮವನ್ನು ಬಿಟ್ಟು ಅಧರ್ಮದತ್ತ ಹೆಜ್ಜೆ ಹಾಕುತ್ತಾರೆ. ಸತ್ಯವನ್ನು ತೊರೆದು ಅಸತ್ಯದತ್ತ ಹೋಗುವರು. ಕಾರಣ ಬುದ್ಧಿ ಕೆಡುವುದರಿಂದ ದೈಹಿಕ, ಸಾಮಾಜಿಕ, ರಾಜನೈತಿಕ, ಆರ್ಥಿಕ, ಆತ್ಮಿಕ ಮುಂತಾದ ಎಲ್ಲಾ ತರಹೆ ರೋಗಗಳುಂಟಾಗುತ್ತವೆ.

ಮಹಾಭಾರತದಲ್ಲಿ ತಿಳಿಸಿದಂತೆ, ಒಬ್ಬನನ್ನು ನಾಶ ಪಡಿಸಲು ಆಯುಧ ಬೇಕಿಲ್ಲ. ಅವನ ಬುದ್ಧಿಯನ್ನು ಕೆಡಿಸಿದರೆ ಸಾಕು. ಏಕೆಂದರೆ ಮನುಷ್ಯನಿಗೆ ಹಣ, ಸಂಪತ್ತು

(35 ನೇ ಪುಟ ನೋಡಿ)

(16ನೇ ಪುಟದಿಂದ)

ಏರ್ಪಡಿಸುವನು. ದ್ರೋಣ ಸುಂದರಿಯರಿಗೆ ಅಶ್ವತ್ಥಾಮನು ಮಗನಾಗುವನು.

ಚಂಪಾಪುರದಲ್ಲಿ ಭಾನುರಾಜನು ದೀಕ್ಷೆಯನ್ನು ವಹಿಸಲು ಕರ್ಣನು ರಾಜನಾಗುವನು. ಜ್ವಾಲಾಮಾಲಿನಿ ದೇವಿಯಿಂದ ತನ್ನ ತಾಯಿ ಯಾರೆಂಬುದನ್ನು ಅರಿಯಲು ಊರಿಮಾಲಿಯೆಂಬ ವಸ್ತ್ರವನ್ನು ಪಡೆಯುವನು. ಕರ್ಣನ ಅಸಾಧಾರಣವಾದ ಶಕ್ತಿಯನ್ನು ಅರಿತು ದುರ್ಯೋಧನನು ಆವನನ್ನು ಸ್ನೇಹಿತನನ್ನಾಗಿ ಮಾಡಿಕೊಂಡು ಅವನನ್ನು ಅನೇಕ ದೇಶಗಳಿಗೆ ರಾಜನನ್ನಾಗಿ ಮಾಡುವನು. ಕೌರವ ಪಾಂಡವರ ದ್ವೇಷ, ಅರಗಿನ ಮನೆಯ ಪ್ರಸಂಗ – ಮೊದಲಾದುವು ಯಥಾಕ್ರಮವಾಗಿ ನಡೆದು ಅರ್ಜುನನಿಗೆ ದ್ರೌಪದಿ ವಿವಾಹವಾಗುವುದು. ಧರ್ಮರಾಯಾದಿ ಇತರ ಸಹೋದರರಿಗೆಲ್ಲಾ ಪ್ರತ್ಯೇಕವಾಗಿ ಅನೇಕ ಮದುವೆಗಳಾಗುವುವು. ಇಂದ್ರಪ್ರಸ್ತವೇ ಮೊದಲಾದ ಎಡೆಗಳಲ್ಲಿ ಪಾಂಡವರು ಸುಖವಾಗಿ ರಾಜ್ಯವಾಳುತ್ತಿರುವಾಗ ಅರ್ಜುನನಿಗೆ ಸುಭದ್ರೆಯೊಡನೆ ವಿವಾಹವಾಗುವುದು. ಅವರಿಗೆ ಅಭಿಮನ್ಯು ಎಂಬುವನು ಜನಿಸುವನು. ಕೃಷ್ಣನ ಮಗಳಾದ ಸುಂದರಿಯು ಅಭಿಮನ್ಯುವಿನ ಪತ್ನಿಯಾಗುವಳು. ಕೌರವಪಾಂಡವರಿಗೆ ದ್ಯೂತವಾಗಿ ಪಾಂಡವರು ವನವಾಸಕ್ಕೆ ತೆರಳುವರು. ಅರ್ಜುನನು ಕಾಡಿನಲ್ಲಿ ಅನೇಕ ವಿದ್ಯೆಗಳನ್ನು ಸಂಪಾದಿಸುವನು. ಮನ್ಮಥನೆಂಬ ರಥನೂಪುರ ಚಕ್ರವಾಳನೆಂಗಪುರದ ಅರಸನು ದ್ರೌಪದಿಯಲ್ಲಿ ಮೋಹಿತನಾಗಿ ಅವಳನ್ನು ಕೊಂಡೊಯ್ಯುವನು. ಬಲದೇವ ವಾಸುದೇವ ಪಾಂಡವಾದಿಗಳು ಹೋಗಿ ಅವಳನ್ನು ಬಿಡಿಕೊಂಡು ಬರುವರು. ವನವಾಸವು ಮುಗಿಯುವುದು. ದ್ರೌಪದಿಯನ್ನು ದ್ರುಪದನ ಮನೆಗೆ, ಕುಂತಿಯನ್ನು ಕೃಷ್ಣನೊಡನೆ ಬೀಳ್ಕೊಟ್ಟು, ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸವನ್ನು ಕಳೆಯುವರು. ಕೀಚಕ ವಧೆ, ಗೋಗ್ರಹಣ, ಕೌರವರಿಗೆ ಪರಾಭವ ನಡೆದು, ಅರ್ಜುನನಿಗೆ ಲಲಿತಾಂಗಿಯೇ ಮೊದಲಾದ ಅನೇಕ ಕನ್ಯೆಯರೊಡನೆ ವಿವಾಹವಾಗುವುದು. ಪಾಂಡವರು ದ್ವಾರಾವತಿಯಿಂದ ಬಂದ ಸತ್ಯಕನೆಂಬುವನೊಡನೆ ವರ್ಷಕಾಲವಾದ ಮೇಲೆ ನೇಮಿದರ್ಶನಕ್ಕೆ ಅಲ್ಲಿಗೆ ಬರುವುದಾಗಿ ಹೇಳಿ ಕಳುಹಿಸುವರು. ಕರ್ಣನು ಉರಿಯ ವಸ್ತ್ರವನ್ನು ಹೊದಿಸಿ ಪರೀಕ್ಷಿಸಿ ಕುಂತಿಯು ತನ್ನ ತಾಯಿಯೆಂದು ಅರಿತು ಅವಳಿಗೆ ತಮ್ಮಂದಿರ ಮೇಲೆ ಅಮೋಘಾಸ್ತ್ರವನ್ನು ಪ್ರಯೋಗ ಮಾಡುವುದಿಲ್ಲವೆಂದು ವಾಗ್ದಾನ ಮಾಡುವನು. ಪಾಂಡವರು ದ್ವಾರಾವತಿಗೆ ಪ್ರಯಾಣಮಾಡಿ ನೇಮಿತೀರ್ಥೇಶ್ವರರಿಗೆ ನಮಸ್ಕರಿಸಿ ಕೃಷ್ಣ ಬಲರಾಮಾದಿಗಳೊಡನೆ ಸುಖವಾಗಿರುವರು.

ಇತ್ತ ದ್ವಾರಾವತಿಗೆ ವ್ಯಾಪಾರಕ್ಕಾಗಿ ಹೋಗಿದ್ದ ಶೆಟ್ಟಿಗಳಿಂದ ಅಲ್ಲಿ ಕೃಷ್ಣ–ಬಲರಾಮರು ನೇಮಿ ತೀರ್ಥಂಕರರ ಆಶ್ರಯದಲ್ಲಿ ಬಹು ವೈಭವದಿಂದ ಮೆರೆಯುತ್ತಿರುವೆಂಬುದನ್ನು ಜರಾಸಂಧನು ಕೇಳಿ, ಯಾದವ ವಂಶವು ನಿರ್ನಾಮವಾಯಿತೆಂದು ತಾನು ಹಿಂದೆ ಕೇಳಿದ ಮಾತು ಸುಳ್ಳಾದುದಕ್ಕೆ ಕಿಡಿಕಿಡಿಯಾಗಿ ಅವರ ಮೇಲೆ ಯುದ್ಧಕ್ಕೆ ಸನ್ನದ್ಧನಾಗುವನು. ಪಾಂಡವರು ತಮಗೆ ಬರಬೇಕಾದ್ದ ರಾಜ್ಯಾರ್ಧಕ್ಕಾಗಿ ಕೃಷ್ಣನ ಸೂಚನೆಯ ಪ್ರಕಾರ ಬಹು ಬುದ್ಧಿವಂತನಾದ ಕೃಷ್ಣನೆಂಬ ದೂತನನ್ನು ಕೌರವರಲ್ಲಿಗೆ ಕಳುಹಿಸುವನು. ಅವನ ದೌತ್ಯವು ನಿಷ್ಫಲವಾಗುವುದು. ಯುದ್ಧವೇ ನಿಷ್ಕರ್ಷೆಯಾಗುವುದು. ಜರಾಸಂಧನು ತನ್ನ ಅಪಾರವಾದ ಸೈನ್ಯವನ್ನು ಕೃಷ್ಣನ ಮೇಲೆ ಕಳುಹಿಸುವನು. ಆದೇ ಸಮಯವೆಂದು ದುರ್ಯೋಧನನು ಅವನ ಪಕ್ಷವನ್ನು ವಹಿಸುವನು. ಪಾಂಡವ ಬಲದೇವ ವಾಸುದೇವಾದಿಗಳು ಸಮುದ್ರವಿಜಯ ನೇಮೀಶ್ವರರಿಗೆ ಎರಗಿ ಯುದ್ಧ ಪ್ರಯಾಣ ಮಾಡುವರು. ಅವನಿಗೆ ಸಹಾಯವಾಗಿ ಬರುತ್ತಿದ್ದ ಕಾಳಶಂಖನೇ ಮೊದಲಾದ ಖೇಚರ ಪಡೆಯನ್ನು ಜರಾಸಂಧನ ಸಾಮಂತರು ಹಿಡಿದಿದ್ದನ್ನು ಕೇಳಿ ವಸುದೇವ ಮನ್ಮಥ ಶಂಭುಕುಮಾರ ಮೊದಲಾದವರು ವಿಜಯಾರ್ಧಗಿರಿಗೆ ಪ್ರಯಾಣಮಾಡುವರು.

ಜರಾಸಂಧ ಕೃಷ್ಣರ ಯುದ್ಧ ಅನಿವಾರ್ಯವಾಯಿತು. ಜರಾಸಂಧನ ಕಡೆ ಕರ್ಣನಿಗೆ ಮೊದಲು ಸೇನಾಧಿಪತ್ಯಾಭಿಷೇಕವಾಯಿತು. ಅವನು ಪದ್ಮವ್ಯೂಹವನ್ನು ರಚಿಸಿದನು. ಇತ್ತ ಅರ್ಜುನನಿಗೆ ಕೃಷ್ಣನೆಂಬುವನು ಸಾರಥಿಯಾದನು. ಮೊದಲು ನಾಲ್ಕುದಿವಸ ಶ್ವೇತ, ಭೀಷ್ಮ, ಕಾಮದಂತ – ಬಲರಾಮ, ಸತ್ಯಕ – ವಜ್ರಬಾಹು, ಜಯದ್ರಥ ಉತ್ತರರಿಗೆ ಯುದ್ಧವಾಯಿತು. ಆಯ್ದನೆಯ ದಿನ ಅಭಿಮನ್ಯುವಿನ ಚಕ್ರವ್ಯೂಹ ಪ್ರವೇಶ, ಮರಣ–ಅದರ ಫಲವಾಗಿಯೇ ಅರ್ಜುನನಿಂದ ಸೈಂಧವವಧೆಯಾಗುವುದು. ಮಾರನೆಯ ದಿನ ಭೀಷ್ಮನು ನಿರ್ವೇಗಪರನಾಗಿ ಯುದ್ಧ ಮಾಡುವಂತೆ ನಟಿಸಿ ಪಂಚಪರಮೇಷ್ಠಿಗಳನ್ನು ಧ್ಯಾನಿಸುತ್ತ ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಮುಂದಿನ ದಿನ ಕರ್ಣನು ಎಲ್ಲರನ್ನೂ ವಿರಥರನ್ನಾಗಿಸಿದನು. ಅದಕ್ಕೆ ಮಾರನೆಯ ದಿನ ದ್ರೋಣರ ಸೇನಾಧಿಪತ್ಯ. ಪಾಂಡವರ ಕಡೆ ದ್ರುಪದನ ಮರಣ. ಪ್ರತಿಪಕ್ಷದಲ್ಲಿ ಧೃಷ್ಟದ್ಯುಮ್ನನಿಂದ ದ್ರೋಣಾಚಾರ್ಯರ ವಧೆ. ಮರುದಿವಸ ಕರ್ಣಾರ್ಜುನರ ಕಾಳಗ. ಯುದ್ಧದಲ್ಲಿ ಅರ್ಜುನನಿಂದ ತನಗೆ ಮಕುಟ ಭಂಗವಾದುದಕ್ಕೆ ನೊಂದು ಕರ್ಣನು ಅದು ಮರಣಕ್ಕೆ ಸಮಾನವೆಂದು ನಿರ್ವೇಗಪರನಾಗಿ ದಮವರರೆಂಬ ಮುನೀಶ್ವರರಲ್ಲಿ ದೀಕ್ಷೆಯನ್ನು ಪಡೆದು ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

ಕರ್ಣನು ಹೊರಟುಹೋದ ಮೇಲೆ ದುರ್ಯೋಧನನು ಬಹುರೂಪಿಣೀ – ವಿದ್ಯೆಯನ್ನು ಸಂಪಾದಿಸಲು ವೈಶಂಪಾಯನ ಸರೋವರದಲ್ಲಿರಲು ಅಲ್ಲಿಗೇ ಭೀಮನು ಬಂದು ಗದಾಯುದ್ಧ ಮಾಡಿ ಅವನ ತೊಡೆಯನ್ನು ಮುರಿಯುವನು. ಜರಾಸಂಧನು ಖಿನ್ನನಾಗುವನು. ಅಶ್ವತ್ಥಾಮನು ರಾತ್ರಿಯಲ್ಲಿ ಕಳ್ಗೊಲೆಯನ್ನು ಮಾಡಿ ತನ್ನ ತಪ್ಪನ್ನರಿತಮೇಲೆ ನಿರ್ವೇಗಪರನಾಗಿ ದೀಕ್ಷೆಯನ್ನು ವಹಿಸುವನು.

ಮರುದಿನ ಕೃಷ್ಣ ಜರಾಸಂಧರಿಗೆ ಕಾಳಗವು ಪ್ರಾರಂಭವಾಯಿತು. ಉಭಯ ಪಕ್ಷಗಳೂ ಬಹು ವೀರಾವೇಶದಿಂದ ಕಾದಾಡಿದವು. ಆದರೂ ಜರಾಸಂಧನ ಅಸ್ತ್ರಗಳೆಲ್ಲ ನಿಷ್ಪ್ರಯೋಜನವಾದುವು. ಆಗ ಅವನು ತನ್ನ ಚಕ್ರವನ್ನು ಪ್ರಯೋಗ ಮಾಡಿದನು. ಅದು ಕೃಷ್ಣನನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಅವನ ಬಲಭಾಗದಲ್ಲಿ ನಿಂತಿತು. ಕೃಷ್ಣನು ನಿರ್ವೀರ್ಯನಾದ ಅವನನ್ನು ಶರಣಾಗೆಂದು ಎಷ್ಟು ಕೇಳಿದರೂ ಒಪ್ಪಲಿಲ್ಲವಾಗಿ ಅದೇ ಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು. ಆಕಾಶದಲ್ಲಿ ಪುಷ್ಪವೃಷ್ಟಿಯಾಗುತ್ತಿರಲು ಎಲ್ಲರೂ ತಮ್ಮ ಬೀಡುಗಳಿಗೆ ತೆರಳಿದರು. ಕೃಷ್ಣ ಬಲರಾಮರು ಭರತ ತ್ರಿಖಂಡವನ್ನೆಲ್ಲ ಗೆದ್ದು ದಿಗ್ವಿಜಯವನ್ನು ಮುಗಿಸಿಕೊಂಡು ದ್ವಾರಾವತಿಗೆ ಬಂದು ನೇಮೀಶರಿಗೆ ನಮಸ್ಕರಿಸಿ ಅವರ ಪ್ರಭಾವವನ್ನು ಕೊಂಡಾಡಿದರು. ಧರ್ಮರಾಜನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರ ವಿದುರರಿಗೆ ಪ್ರತ್ಯೇಕ ರಾಜ್ಯಗಳನ್ನಿತ್ತು ಅನುಜರಿಗೆ ಹಸ್ತಿನಾವತಿಯನ್ನು ಕೊಟ್ಟು ತಾನು ದಕ್ಷಿಣ ಮಥುರೆಯಲ್ಲಿ ನೆಲೆಸಿದನು.

ಹೀಗೆ ಕೆಲವು ದಿನ ಕಳೆಯುತ್ತಿರಲಾಗಿ ಒಂದು ವಸಂತಕಾಲದಲ್ಲಿ ನೇಮೀಶ್ವರರು ಇತರರ ಒತ್ತಾಯದ ಮೇಲೆ ಜಲಕ್ರೀಡೆಯಾಡುತ್ತಿರುವಾಗ ಸತ್ಯಭಾಮೆಯು ನಾಗಶಯ್ಯೆಯನ್ನೇರಿ ಪಾಂಚಜನ್ಯವನ್ನೂದಿದ ತನ್ನ ಪತಿ ಕೃಷ್ಣನಿಗೆ ನೇಮೀಶ್ವರರು ಸಮಾನವಲ್ಲವೆಂದು ಅಲ್ಲಗಳೆದಳು. ನೇಮೀಶ್ವರರಿಗೂ ಕೋಪಬಂದು ತಕ್ಷಣ ಆಯುಧಶಾಲೆಗೆ ಹೋಗಿ ಆ ಕಾರ್ಯಗಳನ್ನು ನಿರಾಯಾಸವಾಗಿ ಮಾಡಿಬಿಟ್ಟರು. ಅದನ್ನು ಕೇಳಿದ ಕೃಷ್ಣ ಬಲರಾಮರು ಅವರು ತಮ್ಮ ರಾಜ್ಯವನ್ನು ಅಪಹರಿಸಬಹುದೆಂಬ ಶಂಕೆಯಿಂದ ಅವರಿಗೆ ಸಂಸಾರದಲ್ಲಿ ನಿರ್ವೇಗವುಂಟುಮಾಡುವ ಸಂಚನ್ನು ಯೋಚಿಸಿ ಸಮುದ್ರವಿಜಯರ ಮೂಲಕ ನೇಮೀಶ್ವರರಿಗೆ ವಿವಾಹವನ್ನೇರ್ಪಡಿಸಿ ಆಕಾಲ

(28ನೇ ಪುಟ ನೋಡಿ)

# ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನ್ನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.
* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿ ನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಶಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 20 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್. ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಜಾಲನ್, ಕಲ್ಕತ್ತ | ರೂ 10 ಲಕ್ಷ |
| 8. | ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 9. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

# ಹರಿಹರ ದೇವಾಲಯ

ಶ್ರೀ ಬಿ. ಷಣ್ಮುಖಾಚಾರ್ಯ

ಚಿತ್ರದುರ್ಗದ ಹೆಸರು ಕೇಳದೇ ಇರುವವರು ಅತಿವಿರಳ. ಇದನ್ನು ದುರ್ಗ ಎಂದೂ ಜನರು ಕರೆಯುವ ವಾಡಿಕೆ. ಈ ಜಿಲ್ಲೆಯು ಚಾರಿತ್ರಿಕವಾಗಿ ಪ್ರಾಮುಖ್ಯ ಪಡೆದಿದೆ. ಇದು ಚಾರಿತ್ರಿಕವಲ್ಲದೆ ಪೌರಾಣಿಕವಾಗಿಯೂ ಕೀರ್ತಿಗಳಿಸಿದೆ. ಚಿತ್ರದುರ್ಗ ಎಂದೊಡನೆ 'ಒನಕೆ ಓಬವ್ವನ' ಹೆಸರು ಜ್ಞಾಪಕ್ಕೆ ಬರುತ್ತದೆ. ಇಲ್ಲಿ ಅನೇಕ ಪುಣ್ಯಕ್ಷೇತ್ರಗಳು ತಮ್ಮ ತಮ್ಮದೇ ಆದ ಒಂದೊಂದು ವೈಶಿಷ್ಟ್ಯದ ಕೀರ್ತಿ ಪಡೆದಿವೆ. ಇವಕ್ಕೆ ಸೇರಿದ ಹರಿಹರ ಪುಣ್ಯಕ್ಷೇತ್ರ, ಶಿಲ್ಪಕಲೆಯ ಬೆಳೆಯಿಂದಲೂ ಗಮನಾರ್ಹ. ಹರಿಹರ ದೇವಾಲಯದ ರಚನೆ, ಶಿಲ್ಪಕಲಾಚಾತುರ್ಯ, ಮೂರ್ತಿಯ ಸೌಂದರ್ಯ – ಇವನ್ನೆಲ್ಲಾ ಕಂಡು ಆನಂದಿಸಲು ಎರಡು ಕಣ್ಣು ಸಾಲದು.

ಚಿತ್ರದುರ್ಗ ಜಿಲ್ಲೆಯ ಹರಿಹರ ತಾಲ್ಲೂಕಿನಲ್ಲಿ, ತುಂಗಭದ್ರಾನದಿಯ ಬಲದಂಡೆಯ ಮೇಲೆ ಉತ್ತರಾಭಿಮುಖವಾಗಿರುವ ಈ 'ಹರಿಹರ' ದೇವಾಲಯವು, ಕರ್ನಾಟಕದಲ್ಲಿರುವ ಪ್ರತಿಷ್ಠಿತ ದೇವಾಲಯಗಳಲ್ಲಿ ಒಂದಾಗಿದೆ. ಬಾದಾಮಿಯ ಚಾಲುಕ್ಯ ವಿನಯಾದಿತ್ಯನ ಹರಿಹರದ ತಾಮ್ರ ಶಾಸನದಲ್ಲಿ (ಕ್ರಿ. ಶ. 694) ಈ ಊರನ್ನು 'ಹರೀಷಪುರ' ಎಂದು ನಿರ್ದೇಶಿಸಲಾಗಿದೆ. ಆದ್ದರಿಂದ ಇದು ಪ್ರಾಚೀನ ಕರ್ನಾಟಕದ ಮುಖ್ಯ ಊರುಗಳೊಲ್ಲೊಂದಾಗಿದೆ.

ಚಾಲುಕ್ಯ ವಿನಯಾದಿತ್ಯನ ಹರಿಹರ ತಾಮ್ರ ಶಾಸನದ ಪ್ರಕಾರ ಈ ಊರು 7ನೇ ಶತಮಾನದ ಅಂತ್ಯಭಾಗದಲ್ಲಿ 'ಹರೀಷಪುರ' ಎಂದು ಕರೆಯಲ್ಪಡುತ್ತಿತ್ತು. ಈ ಹೆಸರು ಹರಿಹರ (ಹರಿ–ಈಶ) ನೆಂಬ ಅರ್ಥಕೊಡುವುದರಿಂದ ಆದರ ಹೆಸರೇ ಊರಿಗೆ ಬರುವಷ್ಟು ಪ್ರಸಿದ್ಧಿ ಹೊಂದಿತೆಂಬುದಾಗಿ ತಿಳಿದರೆ ತಪ್ಪಾಗಲಾರದು.

ಕಾಶಿಖಂಡದ ಅಗಸ್ತ್ಯ-ಲೋಪಾಮುದ್ರೆಯರ ಸಂವಾದದಲ್ಲಿ ಈ ಪ್ರದೇಶವನ್ನು 'ಗುಹಾಸುರಾರಣ್ಯ' ಕ್ಷೇತ್ರವೆಂದು ವರ್ಣಿಸಲಾಗಿದೆ. ಈ ಗುಹಾಸುರ ಅತಿ ಪರಾಕ್ರಮಶಾಲಿಯಾಗಿ ಮೆರೆಯುತ್ತಿದ್ದನು. ಇವನು ಈ ಹಿಂದೆ ಹರಿಯಿಂದಾಗಲಿ ಅಥವಾ ಹರನಿಂದಾಗಲಿ ಮರಣವಿಲ್ಲದಂತೆ ವರವನ್ನು ಪಡೆದಿದ್ದನು. ಈ ವರದ ಬಲವಾಗಿ ದೇವ ಮಾನವರನ್ನೆಲ್ಲ ಕಾಡುತಿದ್ದನು. ಇವನ ಉಪಟಳವನ್ನು ತಡೆಯಲಾರದೆ ಪರಮಾತ್ಮನು ಹರಿಹರ ರೂಪದಲ್ಲಿ ಈ ಅರಣ್ಯಕ್ಕೆ ಬಂದು, ಆ ಅಸುರನ ಜೊತೆ ಘೋರ ಯುದ್ಧ ಮಾಡಿ ಇವನನ್ನು ಸಂಹರಿಸಿದನು. ಆದ್ದರಿಂದ ಇದು ಹರಿಹರ ಕ್ಷೇತ್ರವಾಯಿತು ಎಂದು ಪುರಾಣ ಕಥೆಯಾಗಿದೆ.

ಹರಿಹರ ದೇವಾಲಯದಲ್ಲಿನ ಹರಿಹರ ಮೂರ್ತಿಯು ಸುಮಾರು ಎರಡೂವರೆ ಅಡಿಯಿಂದ 3 ಅಡಿ ಎತ್ತರದ ಸಮಭಂಗಿಯಲ್ಲಿರುವ ದುಂಡು ಶಿಲ್ಪದ ಭವ್ಯ ಮೂರ್ತಿ. ಕೈಗಳು ಮತ್ತು ತೊಡೆಗಳ ಬದಿಯ ಉಂಗುರಾಕಾರದ ವಸ್ತ್ರದ ನಿರಿಗೆ, ಮೊಣಕಾಲಿನ ಕೆಳಭಾಗ ಬೇರೆಯಾಗಿದೆ ದಷ್ಟಪುಷ್ಟವಾದ ಮೈಕಟ್ಟು, ಅದಕ್ಕೆ ಸರಿಯಾದ ನಿಲುವು. ಇದು ಚತುರ್ಭುಜವುಳ್ಳದ್ದಾಗಿ. ಕೆಳಬಲಗೈನ ಅಭಯ ಮುದ್ರೆ, ಮೇಲಿನ ಕೈಗಳಲ್ಲಿ ತ್ರಿಶೂಲ, ಚಕ್ರವೂ ಕೆಳ ಎಡಗೈಯಲ್ಲಿ ಶಂಖವೂ ಇದೆ. ತಲೆಯ ಮೇಲೆ ಚಂದ್ರ ಸಹಿತ ಅರ್ಧಜಟಾ, ಅರ್ಧ ಕಿರೀಟ ಮುಕುಟವಿದೆ. ಕಿರೀಟದೊಳಗಿನಿಂದ ಇಳಿದ ತಲೆಗೂದಲು ಸುರುಳಿ ಸುರುಳಿಯಾಗಿ ಎಡ ಭುಜದ ಮೇಲಿದೆ. ಕುತ್ತಿಗೆಗೆ ಮಣಿ ಖಚಿತ ಸರ ಮತ್ತು ಪೋಣಿಸಿದ ದುಂಡು ಮಣಿಗಳ ಮತ್ತೊಂದು ಸರ, ಹೊಟ್ಟೆಯ ಮೇಲೆ, ಉದರ ಪಟ್ಟಿ (ಡಾಬು) ತೋಳಿಗೆ ಸರಳ ಮಣಿಖಚಿತ ಪಟ್ಟಿ, ಎರಡು ಕಡೆಗಳಲ್ಲಿ ಉಂಗುರಗಳ ಮಾಲೆಯಂತೆ ಇಳಿಬಿದ್ದ ಧೋತ್ರವನ್ನು ಕಚ್ಚೆ ಹಾಕಿ ಬಿಗಿದು ಕಟ್ಟಲಾಗಿದೆ. ಮುಂದೆ ಮಾಲಾಕಾರವಾಗಿ ಕಟಿಸೂತ್ರದಿಂದ ಇಳಿ ಬಿದ್ದ ವಸ್ತ್ರಪಟ್ಟಿಯಿದೆ. ತ್ರಿಶೂಲ, ಚಕ್ರ ಮತ್ತು ಶಂಖಗಳನ್ನು ನೋಡಿದಾಗ ಪಾಳೆಯಗಾರರ ಕಾಲದ್ದೆಂದು ತಿಳಿದು ಬರುತ್ತದೆ.

ಸನ್ 1124 ರಲ್ಲಿ ಇಮ್ಮಡಿ ನರಸಿಂಹ ಬಲ್ಲಾಳನ ದಂಡನಾಯಕ ಪೆರ್ಮಾಡಿ ಪೋಲಾಳ್ವನು ಪೂರ್ಣವಾಗಿ ಬಿಚ್ಚಿ ಕಟ್ಟಿಸಿದ ಈ ದೇವಾಲಯದ ಸುಮಾರು 60 ಕ್ಕೂ ಮಿಕ್ಕಿ ಕಂಬಗಳುಳ್ಳದ್ದು. ಮಹಾ ಮಂಟಪ ಅತ್ಯಂತ ವೈಭವವಾಗಿದ್ದು ಇದರ ವೈಶಾಲ್ಯವನ್ನು ಬಹಳಷ್ಟು ಹೆಚ್ಚಿಸಿದೆ. ಇದರಿಂದ ಒಳಗೆ ಹೋದರೆ ಮುಂದೆ ಕ್ರಮವಾಗಿ ಸಭಾಮಂಟಪ, ಅರ್ಧ ಮಂಟಪ ಮತ್ತು ಗರ್ಭಗುಡಿಗಳಿವೆ. ಇದರ ಅಧಿಷ್ಠಾನ ಗೋಡೆಯಲ್ಲಿ ಕ್ರಮವಾದ ಉಬ್ಬು ಶಿಲ್ಪಗಳು ಮೇಲಿನ ಪ್ರಸ್ತರ ಮತ್ತು ಹಾರಗಳ ಲಕ್ಷಣಗಳು ಒಳಗಿನ ಕಂಬಗಳ ಮತ್ತು ಬಾಗಿಲುಗಳ ಮಾಟ-ಇವೆಲ್ಲವು ಕಲ್ಯಾಣಿ ಚಾಲುಕ್ಯರ ಶಿಲ್ಪ ಶೈಲಿಯಲ್ಲಿಯೇ ಇವೆ.

ಈ ದೇವಾಲಯದ ಹೊರಬದಿಯಲ್ಲಿ ಸಾವಿರ ಕಂಬದ ಮಂಟಪದ ದಕ್ಷಿಣ ಬದಿಗೆ ಹೊಂದಿಕೊಂಡ ಹಾಗೆ ಮುಖಮಂಟಪ, ಅರ್ಧ ಮಂಟಪ ಮತ್ತು ಗರ್ಭಗೃಹಗಳನ್ನು ಒಳಗೊಂಡ ಒಂದು ಸಣ್ಣ ಶಿವದೇವಾಲಯವನ್ನು ಸೇರಿಸಲಾಗಿದೆ. ಮುಖ ಮಂಟಪದ ಎಡ ಬದಿಗೆ ಸ್ವಲ್ಪ ಅಂತರದಲ್ಲಿ ಪ್ರತ್ಯೇಕವಾದ ಒಂದು ಲಕ್ಷ್ಮಿದೇವಾಲಯವಿದೆ. ಗರ್ಭಗುಡಿಯಲ್ಲಿ ಈಗಿನ ಕಾಲದ ಜಯಪುರದ ಬಿಳೀಕಲ್ಲಿನ ಮಹಿಷಮರ್ದಿನಿ ಮೂರ್ತಿ ಇದೆ. ಇವೆರಡೂ ದೇವಾಲಯಗಳೂ ಶೈಲಿಯಲ್ಲಿ ಹರಿಹರೇಶ್ವರ ದೇವಾಲಯದಂತಿವೆ. 1268 ರಲ್ಲಿ ಹೊಯ್ಸಳ ರಾಜರ ಸೋಮನಾಥನೆಂಬ ಅಧಿಕಾರಿ ಈ ದೇವಾಲಯದ ಸಮೂಹದ ಸುತ್ತಲೂ ಸಾಕಷ್ಟು ಸ್ಥಳವನ್ನು ಬಿಟ್ಟು ಪ್ರಾಕಾರದ ಮಹಾದ್ವಾರವನ್ನು ಕಟ್ಟಿಸಿದನು. 14 ನೇ ಶತಮಾನದಲ್ಲಿ ದೆಹಲಿ ಸುಲ್ತಾನರ ದಕ್ಷಿಣಭಾರತದಲ್ಲಿಯ ದಂಡೆಯಾತ್ರೆಗಳ ಸಮಯದಲ್ಲಿ ಈ ದೇವಾ

ಲಯವೂ ಇವರ ಧಾಳಿಗೆ ಸಿಕ್ಕಿ ಗರ್ಭ ಗುಡಿಯೂ ಮುಕ್ಕಾಗಿರಬೇಕು. ಇಂಥ ಹಾವ ಳಿಗಳಿಂದ ತಪ್ಪಿಸಲೋ ಏನೋ ಹಾರದಲ್ಲಿಯು ಕೂಟಗಳಲ್ಲಿಯು ಉಬ್ಬು ಶಿಲ್ಪಗಳಿಲ್ಲವನ್ನು ಉಳಿಯಿಂದ ತೆಗೆಯಲಾಗಿದೆ. ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆಯಲ್ಲಿ ಈ ದೇವಾ ಲಯವೂ ಮತ್ತೆ ಜೀರ್ಣೋದ್ಧಾರವಾಗಿದೆ. ತುಂಡು ತುಂಡಾದ ಗರ್ಭಗೃಹವನ್ನು ಮತ್ತೆ ನಿರ್ಮಿಸಲಾಯಿತೆಂದು ತೋರುತ್ತದೆ.

ಈ ದೇವಾಲಯಕ್ಕೆ ಉಜ್ಜಂಗಿ ದೊರೆ ಗಳಾಗಿದ್ದ ವೀರ ಮತ್ತು ವಿಜಯ ಪಾಂಡ್ಯರು ಕಳಚುರ್‍ಯ ಬಿಜ್ಜಳರಸರು, ದೇವಗಿರಿ ಸೇವುಣವಂಶದ ಅರಸರು ದತ್ತಿಗಳನ್ನು ಕೊಟ್ಟ ಉಲ್ಲೇಖಗಳುಳ್ಳ ಹಲವಾರು ಶಿಲಾಶಾಸನಗಳಿವೆ.

ಇಂಥ ಚಾರಿತ್ರಿಕವಾದ ಭವ್ಯ ದೇವಾ ಲಯ ಒಂದು ಮುಖ್ಯ ಯಾತ್ರಾಸ್ಥಳ, ಪುಣ್ಯಕ್ಷೇತ್ರ ಇದು ಚಿತ್ರದುರ್ಗ ಜಿಲ್ಲೆಗೆ ಕಳಸ ಪ್ರಾಯವಾಗಿ ವಿರಾಜಮಾನವಾಗಿ ಕಂಗೊಳಿಸುತ್ತಿವೆ.

(25ನೇ ಪುಟದಿಂದ)
ದಲ್ಲಿ ಕೃತ್ರಿಮವಾದ ಹಿಂಸಾತ್ಮಕ ಸನ್ನಿವೇಶ ಗಳನ್ನು ಕಲ್ಪಿಸಿ, ಅವರು ಸಂಸಾರಾನಿತ್ಯತೆಗೆ ಹೇಸಿ ದೀಕ್ಷೆಗೊಳ್ಳುವಂತೆ ಮಾಡಿದರು. ಇಂದ್ರನು ಪರಿ ನಿಷ್ಕ್ರಮಣ ಕಲ್ಯಾಣವನ್ನು ನಡೆಸಿದನು ಮುಂದೆ ಯೋಗ್ಯವಾದ ತಪಸ್ಸನ್ನಾಚರಿಸಲು ಕೇವಲ ಜ್ಞಾನೋತ್ಪತ್ತಿಯಾಯಿತು. ಪಂಚಕಲ್ಯಾಣ ಗಳೂ ಪೂರ್ಣಗೊಂಡವು. ಇಂದ್ರಾದಿ ಸಮಸ್ತ ದೇವತೆಗಳೂ ಬಲರಾಮ ಕೃಷ್ಣಾದಿಗಳೂ ತೀರ್ಥಂ ಕರರಿಗೆ ತ್ರಿಃಪ್ರದಕ್ಷಿಣವನ್ನು ಮಾಡಿ ನಮಸ್ಕ ರಿಸಿ ಬೇಡಿಕೊಂಡಂತೆ ಅವರು ನಾನಾ ದೇಶಗಳಲ್ಲಿ ಸಂಚಾರ ಮಾಡಿ ಧರ್ಮಾಮೃತ ವರ್ಷದಿಂದ ಲೋಕವನ್ನು ತೃಪ್ತಿಗೊಳಿಸಿದರು. ಒಂದುದಿನ ಬಲರಾಮನೆದ್ದು ನೇಮಿಜಿನೇಶರಿಗೆ ಕೈಮುಗಿದು ತಮ್ಮ ಮತ್ತು ದ್ವಾರಾವತಿಯ ಭವಿಷ್ಯವೇನೆಂದು ಕೇಳಲು, ಅಂದಿನಿಂದ ಹನ್ನೆರಡು ವರ್ಷಕ್ಕೆ ದ್ವಾರಾವತಿಯು ದೀಪಾಯನನಿಂದ ಸುಟ್ಟು ಹೋಗುವುದೆಂದೂ, ಕೃಷ್ಣ ಬಲರಾಮರಿಬ್ಬರು ವಿನಾ ಎಲ್ಲ ಯಾದವರೂ ಬೆಂದು ಹೋಗುವ ರೆಂದೂ, ಜರತ್ಕುಮಾರನ ಬಾಣದಿಂದ ಕೃಷ್ಣನು ಮರಣವನ್ನೈದಿ ಕಾಲಾಂತರದಲ್ಲಿ ತೀರ್ಥಂಕರ ನಾಗುವನೆಂದೂ, ಬಲರಾಮನು ಅವನ ದುಃಖ ದಿಂದ ನರಳಿ ಸತ್ತು ಕೃಷ್ಣತೀರ್ಥಂಕರರ ಅನಂತರ ಕಾಲದಲ್ಲಿ ಹುಟ್ಟಿ ಕರ್ಮಕ್ಷಯಮಾಡಿ ತೀರ್ಥಂ ಕರನಾಗುವನೆಂದೂ ತಿಳಿಸಿದರು. ಇದನ್ನು ಕೇಳಿದ ಮದನನಿಗೆ ನಿರ್ವೇಗವುಂಟಾಯಿತು. ಮೊದಲು ಪ್ರತಿಭಟಿಸಿದ ತನ್ನವರಿಗೆಲ್ಲ ಧರ್ಮೋಪ ದೇಶ ಮಾಡಿ ಅವರೊಡನೆ ಮದನನು ದೀಕ್ಷೆಯನ್ನು ವಹಿಸಿದನು. ನೇಮೀಶರ ವಾಕ್ಯದಂತೆಯೇ ದ್ವಾರಾವತಿಯು ಅಗ್ನಿದಗ್ಧವಾಯಿತು ಕೃಷ್ಣನು ಜರತ್ಕುಮಾರನ ಬಾಣದಿಂದ ಪ್ರಾಣವನ್ನು ನೀಗಿ ದನು. ಬಲರಾಮನು ಮೋಹದಿಂದ ತಮ್ಮನ ಹೆಣವನ್ನು ಹೊತ್ತು ಅಲೆದು ಜ್ಞಾನೋದಯ ವಾದ ಮೇಲೆ ಅದನ್ನು ಸುಟ್ಟು ದೀಕ್ಷೆಯನ್ನು ಹೊಂದಿ ಸತ್ತು ಅಯ್ದನೆಯ ಸ್ವರ್ಗದಲ್ಲಿ ದೇವನಾ ದನು. ನೇಮಿಜಿನೇಶರಿಗೆ ಸಮವಸರಣ ಪ್ರಾಪ್ತಿ ಯಾಯ್ತು. ಪಾಂಡವರೇ ಮೊದಲಾದ ಅನೇಕರು ತಮ್ಮ ಭವಾವಳಿಗಳನ್ನರಿತು ಕರ್ಮಕ್ಷಯವನ್ನು ಮಾಡಿ ದೀಕ್ಷೆಗೊಂಡರು. ದೇವೇಂದ್ರನು ಸ್ವಾಮಿಯ ನಿರ್ವಾಣ ಕಲ್ಯಾಣದಲ್ಲಿ ಆನಂದನೃತ್ಯವನ್ನಾಡಿ ಲೋಕವನ್ನು ತಣಿಸಿದನು. ★

---

## ಪುಸ್ತಕವಿಮರ್ಶೆ

### ಕೋಲಾರಜಿಲ್ಲೆಯ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಇತರ ವಿಷ್ಣು ದೇವಾಲಯಗಳು

ಲೇಖಕ: ಕೆ. ಆರ್. ನರಸಿಂಹನ್
ಪ್ರಕಾಶಕರು: ಕೋಲಾರ ಪತ್ರಿಕೆ ಪ್ರಕಾಶನ, ಕೋಲಾರ
ಪುಟ: 128+VIII+18.
ಬೆಲೆ ರೂ. 12/–

ಈ ಗ್ರಂಥದಲ್ಲಿ ಕೋಲಾರ ಜಿಲ್ಲೆಯ ಭೂಗೋಳಿಕ ಪರಿಚಯವಲ್ಲದೆ ಇಲ್ಲಿ ರಾರಾಜಿಸುತ್ತಿರುವ ಶ್ರೀ ವೆಂಕಟೇಶ್ವರಸ್ವಾಮಿ ಮತ್ತು ಇತರ ವಿಷ್ಣು ದೇವಾಲಯಗಳ ಪರಿಚಯವಿದೆ. ಲೇಖಕರೇ ಹೇಳುವಂತೆ ಸ್ವರ್ಣ ಭೂಮಿಯೆಂಬ ಅಭಿದಾನವನ್ನು ಪಡೆದಿರುವ ಈ ಜಿಲ್ಲೆಯು ಪೌರಾಣಿಕವಾಗಿ ಹಾಗೂ ಐತಿಹಾಸಿಕವಾಗಿ ರಾಜ್ಯದಲ್ಲಿಯೇ ವಿಶೇಷ ಮನ್ನಣೆಗೆ ಪಾತ್ರವಾಗಿದೆ. ಈ ಜಿಲ್ಲೆಯಲ್ಲಿರುವ ದೇವಾಲಯಗಳು ಆಗಿನ ಕಾಲದ ರಾಜಮಹಾರಾಜರುಗಳ ಕಲಾ ಪ್ರೇಮಕ್ಕೂ ಸಾಕ್ಷಿಯಾಗಿ ನಿಂತಿವೆ.

ಮುಳಬಾಗಿಲು, ಆಲಂಬಗಿರಿ, ಗಡಿದಂ, ಚಿಕ್ಕತಿರುಪತಿ, ಮಾಸ್ತಿ, ಕೆ. ಜಿ. ಎಫ್, ಗುಟ್ಟಹಳ್ಳಿ, ರಾಮಸಾಗರ, ಗುಡಿಬಂಡೆ, ರೋಣೂರು, ಗನಿಬಂಡ, ಘಟ್ಟು ವೆಂಕಟರಮಣ, ದಾರಿನಾಯಕನ ಪಾಳ್ಯ, ಗೌರೀಬಿದನೂರು, ಮಂಚೇನಹಳ್ಳಿ, ಚಿಂತಾಮಣಿ, ತಲಕಾಯಲಬೆಟ್ಟ, ಕೋಲಾರ, ಉತ್ತನೂರು, ಟೇಕಲ್, ಬೇತಮಂಗಲ, ಯಗವಕೋಟೆ, ಕೈವಾರ, ಕುರುಡುಮಲೆ, ಬ್ಯಾಟರಾಯಸ್ವಾಮಿ ದಿಬ್ಬ, ಮಾರ್ಗಾನುಕುಂಟೆ, ಮಿಟ್ಟೆಮರಿ, ಕೋನಗುಂಟ್ಲು, ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿರುವ ವರ್ಣನೆ ಇಲ್ಲಿ ಹೃದಯಂಗಮ.

ಕರ್ನಾಟಕ ರಾಜ್ಯಕ್ಕೆ ಮೂಡಣದ ಬಾಗಿಲೆಂದು ಪ್ರಸಿದ್ಧವಾಗಿರುವ ಊರು ಮುಳಬಾಗಿಲು. ಆಂಜನೇಯಸ್ವಾಮಿಯ ದೇವಾಲಯವು ಮುಳಬಾಗಿಲಿನ ಬಸ್ ನಿಲ್ದಾಣದ ಪಕ್ಕದಲ್ಲಿಯೇ ಇದೆ ಪಡುವಣ ದಿಕ್ಕಿನಲ್ಲಿ ಎತ್ತರವಾದ ಗೋಪುರ ಮಹಾದ್ವಾರಗಳಿವೆ. ಮೂಡಣದ ಕಡೆಗೂ ಆಂಜನೇಯನ ಎತ್ತರವಾದ ಬಣ್ಣದ ವಿಗ್ರಹ ಮತ್ತು ಸುಸಜ್ಜಿತವಾದ ದ್ವಾರಗಳಿವೆ. ದಕ್ಷಿಣಭಾಗದಲ್ಲಿ ತಿರುಪತಿ–ತಿರುಮಲೆಗಳ ನೆನಪನ್ನು ತರುವ ಸುಂದರವಾದ ವೆಂಕಟರಮಣಸ್ವಾಮಿಯ ದೇವಾಲಯವು ಕಂಗೊಳಿಸುತ್ತಿದೆ. ಉತ್ತರದಲ್ಲಿ ರಂಗನಾಥಸ್ವಾಮಿಯ ದೇವಸ್ಥಾನವಿದೆ.

ಆಲಂಬಗಿರಿಯ ವೆಂಕಟರಮಣಸ್ವಾಮಿ ದೇವಸ್ಥಾನವಿಲ್ಲಿ ಉಲ್ಲೇಖನೀಯ. ದೇವಸ್ಥಾನದ ಐತಿಹಾಸಿಕ ವಿವರಗಳನ್ನು ಶಾಸನಗಳ ಆಧಾರದ ಮೇಲೆ ನೀಡಲಾಗಿದೆ.

ಗಡಿದಂ ಶ್ರೀನಿವಾಸನ ದೇವಾಲಯ ತಿರುವೆಂಗಡನಾಥ ದೇವಾಲಯ. ಇದರ ಬಗೆಗೆ ಅವರು ಕೊಟ್ಟಿರುವ ಶಾಸನಪದ್ಯ ಇಲ್ಲಿ ಉಲ್ಲೇಖನೀಯ

"ಲಕ್ಷ್ಮೀ ವೆಂಕಟರಮಣಸ್ವಾಮಿ ಮಹಾದ್ವಾರಮು ಗೊಲ್ಲಪಲ್ಲಿ ಕೆ. ರಾಮಯ್ಯ ಶ್ರೇಷ್ಠಿವಾರಿ ಸೇವ. ಶಾ ಶಕ 1821 ವಿಕಾರಿ ನಾಮ ಸಂವತ್ಸರ ಶ್ರಾವಣ ಶುದ್ಧ ಬುಧವಾರ 8–11–1899"

ಗನಿಬಂಡದ ವೆಂಕಟರಮಣಸ್ವಾಮಿಯ ದೇವಾಲಯ ಪ್ರಶಸ್ತವಾದ ಪ್ರದೇಶದಲ್ಲಿದೆ. ಜೊತೆಗೆ ಪದ್ಮಾವತಮ್ಮನವರಿಗಾಗಿ ಪ್ರತ್ಯೇಕವಾದ ದೇವಾಲಯವೊಂದಿದೆ.

ಮುಳಬಾಗಿಲು ತಾಲೂಕಿನ ಬೈರಕೂರಿಗೆ ಪೂರ್ವಕ್ಕೆ ಇರುವ ಘಟ್ಟು ವೆಂಕಟರಮಣಸ್ವಾಮಿಯ ದೇವಾಲಯ ಘಟ್ಟ ಪ್ರದೇಶದಲ್ಲಿದೆ. ಇಲ್ಲಿ ನಡೆಯುವ ದನಗಳ ಜಾತ್ರೆ ತುಂಬಾ ದೊಡ್ಡದು. ಪ್ರತಿ ವರ್ಷ ಈ ಜಾತ್ರೆಯಲ್ಲಿ 10 000 ದನಗಳ ಮಾರಾಟ–ನಾಗುತ್ತವೆ

ದಾರಿನಾಯಕನ ಪಾಳ್ಯದ ವೆಂಕಟರಮಣಸ್ವಾಮಿ ದೇವಾಲಯ, ಇದರ ಆವರಣದಲ್ಲಿ

## ಸಾರ್ಥಕ ಪುಸ್ತಕ

ಏತತ್‌ಸುರಾ ಸುರಾಧೀಶ
ಮೌಳಿಮಾಲಾ ವಿಲೋಲಿತಮ್ ।
ಗಡಿದ ಶ್ರೀನಿವಾಸಸ್ಯ
ದೇವ ದೇವೇಶಶಾಸನಮ್ ॥

ಚಿಕ್ಕ ತಿರುಪತಿ ಶ್ರೀನಿವಾಸನ ಪವಿತ್ರವಾದ ಶ್ರೀನೆಲೆ. ಇದನ್ನು ಜನಮೇಜಯರಾಯನ ಯಾಗ ಭೂಮಿಯೆಂದೂ ಕರೆಯುತ್ತಾರೆ. ಇದು ತುಂಬಾ ಪುರಾಣಪ್ರಸಿದ್ಧವಾದ ದೇವಾಲಯ.

ಮಾಸ್ತಿ ಶ್ರೀವೈಷ್ಣವ ಧರ್ಮದ ನೆಲೆವೀಡು, ಇಲ್ಲಿಯ ವೆಂಕಟರಮಣಸ್ವಾಮಿ ದೇವಾಲಯ ಶಾಸನಗಳಲ್ಲಿ ಪ್ರಸಿದ್ಧ.

ಕೆ. ಜಿ. ಎಫ್. ನ ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯ ಗುಟ್ಟಹಳ್ಳಿಯ ಬಂಗಾರು ತಿರುಪತಿ,ರಾಮಸಾಗರದ ವೆಂಕಟರಮಣಸ್ವಾಮಿ ದೇವಾಲಯ ಗುಡಿಬಂಡೆಯಲ್ಲಿರುವ ವೆಂಕಟರಮಣಸ್ವಾಮಿ, ಅಲ್ಲಿಯ ಗರ್ಭಗೃಹದ–ವಿವರಣೆ ಎಲ್ಲವೂ ಹೃದಯಂಗಮವಾಗಿದೆ.

ರೋಣೂರಿನಲ್ಲಿರುವ ದೇವಾಲಯಕ್ಕೆ ಇಲ್ಲಿದೆ ಶಾಸನ ಸಾಕ್ಷ್ಯ–ರಂಗನಾಥಸ್ವಾಮಿಯ ದೇವಾಲಯವೂ ಉಂಟು.

ಉಳಿದಂತೆ ಉಲ್ಲೇಖನೀಯವಾದ ದೇವಾಲಯಗಳೆಂದರೆ ಚಿಂತಾಮಣಿಯ ಪ್ರಮುಖ ಪ್ರದೇಶದಲ್ಲಿ ವಿರಾಜಮಾನನಾಗಿರುವ ವೆಂಕಟರಮಣಸ್ವಾಮಿ, ಕೋಲಾರದ ವರದರಾಜಸ್ವಾಮಿ ದೇವಾಲಯ,ಉತ್ತನೂರಿನ ಶ್ರೀ ಪ್ರಹ್ಲಾದ ವರದರಾಜಸ್ವಾಮಿ ದೇವಾಲಯ ಬೇತಮಂಗಲದ ಪುರಾಣ ಪ್ರಸಿದ್ಧವಾದ ನಾರಾಯಣಸ್ವಾಮಿ ದೇವಾಲಯ–ಇವೆಲ್ಲವುಗಳನ್ನೂ ಲೇಖಕರು ಪಂಡಿತ ಪಾಮರರಿಬ್ಬರೂ ಅರ್ಥ ಮಾಡಿಕೊಳ್ಳುವಂತೆ ಅಚ್ಚುಕಟ್ಟಾಗಿ ವರ್ಣಿಸಿ ಉಪಕರಿಸಿದ್ದಾರೆ.

ಈ ಗ್ರಂಥದ ಪ್ರಕಟಣೆಗೆ ತಿರುಮಲೆ ತಿರುಪತಿ ದೇವಸ್ಥಾನವು ಧನ ಸಹಾಯ ನೀಡಿ ಉಪಕಾರ ಮಾಡಿದ್ದಾರೆ.

ಈ ಗ್ರಂಥದ ಭಾಷೆ ತುಂಬಾ ಸುಂದರವಾಗಿದ್ದು ಸರಳವಾಗಿದೆ. ಅನೇಕ ಉಪಯುಕ್ತ ಚಿತ್ರಗಳು ಈ ಹೊತ್ತಗೆಯಲ್ಲಿ ಅಡಕವಾಗಿವೆ.

–ಕುಮುದಪ್ರಿಯ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ವೈಕುಂಠಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆಕಚೇರಿಯು ರಾತ್ರಿ 10–30 ರಿಂದ 1–00 ಗಂಟೆಯವರೆಗೆ ಕೆಲಸಮಾಡುತ್ತದೆ.

## ಗೃಹಲಕ್ಷ್ಮಿ

# ಸತಿ ಶೀಲಾ

"ಸುಮಂತು" ಎಂಬ ವಶಿಷ್ಠಗೋತ್ರದ ಬ್ರಾಹ್ಮಣ ಪುತ್ರಿಯಾಗಿ ಜನಿಸಿದವಳು ಶೀಲಾ. ಶೀಲಾ ಜನಿಸಿದ ಕೆಲವೇ ವರ್ಷಗಳಲ್ಲಿ ಇವಳ ತಾಯಿ ತೀರಿಹೋದಳು. ಸುಮಂತ ತನ್ನ ಗಾರ್ಹಸ್ಥ್ಯ ಧರ್ಮ ನಿರ್ವಾಹಕ್ಕಾಗಿ ಎರಡನೆಯ ಮದುವೆಯನ್ನು ಮಾಡಿಕೊಳ್ಳಬೇಕಾಯಿತು. ಆದರೆ ಕೈಹಿಡಿದ ಹೆಂಡತಿ ಕರ್ಕಶೆಯಾಗಿದ್ದಳು. ಶೀಲಾ ಸ್ವಯಂ ಶೀಲ ಸಂಪನ್ನಳಾಗಿದ್ದರೂ, ಅವಳಿಗೆ ಹಿಡಿಸಲಿಲ್ಲ. ಈಕೆಯನ್ನು ಬಹುವಾಗಿ ಹಿಂಸಿಸಲಾರಂಭಿಸಿದಳು. ಅವಳೊಡನೆ ಹೊಂದಿಕೊಂಡು ಬಾಳಲು ಶೀಲಾ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವು.

'ಶೀಲೆ'ಯು ಪಡುತ್ತಿದ್ದ ಕಷ್ಟಗಳನ್ನು ಕಣ್ಣಾರೆ ಕಂಡ ತಂದೆ ಸುಮಂತುವಿಗೆ ಏನಾದರೂ ಮಾಡಿ ಈಕೆಯ ವಿವಾಹವನ್ನು ಶೀಘ್ರವಾಗಿ ನಡೆಸಿ ಬಿಡಬೇಕೆಂಬ ಭಾವನೆ ಬೆಳೆದು ಬಂದಿತು. ಇವನ ಪುಣ್ಯವೋ ಎಂಬಂತೆ ಒಂದು ದಿನ ಯೋಗ್ಯನಾದವರನೊಬ್ಬ 'ಸುಮಂತು'ವಿನ ಮನೆಯ ಬಾಗಿಲಿಗೆ ತಾನಾಗಿಯೇ ಬಂದನು. "ತಮ್ಮ ಸುಶೀಲೆಯಾದ ಕನ್ಯೆಯನ್ನು ನಾನೇ ಮದುವೆಯಾಗುತ್ತೇನೆ" ಎಂದು ನುಡಿದ ಆತನ ಮಾತಿಗೆ ಸಂತಸಪಟ್ಟ ಸುಮಂತುವು ವಿಧಿವತ್ತಾಗಿ ಈಕೆಯನ್ನು ಮದುವೆ ಮಾಡಿಕೊಟ್ಟನು.

ಕೌಂಡಿನ್ಯನು ತನ್ನ ಪತ್ನಿಯಾದ ಶೀಲಾಳನ್ನು ಕರೆದು ಕೊಂಡು ತನ್ನಊರಿಗೆ ಹಿಂದಿರುಗಿದನು.

ಒಂದು ದಿನ ಮಧ್ಯಾಹ್ನದ ವೇಳೆಯಲ್ಲಿ ಕೆಂಪು ಉಡುಗೆಯನ್ನು ಉಟ್ಟ ಕೆಲವಾರು ಸ್ತ್ರೀಯರ ನದಿಯ ದಡದಲ್ಲಿ ಯಾವುದೋ ವಿಶೇಷವಾದ ವ್ರತದಲ್ಲಿ ನಿಷ್ಠರಾಗಿರುವುದನ್ನು ಶೀಲೆ ಕಂಡಳು.

"ಅಕ್ಕಂದಿರಾ! ಇಂದು ನೀವು ಮಾಡುತ್ತಿರುವ ವಿಶೇಷವಾದ ವ್ರತವಾವುದು? ಇದರ ಫಲವೇನು? ಯಾವ ಕ್ರಮದಿಂದ ಈ ವ್ರತವನ್ನು ಆಚರಿಸಬೇಕು?" ಎಂದು ಆ ಸ್ತ್ರೀಯರನ್ನು ಈಕೆ ಪ್ರಶ್ನಿಸಿದಾಗ ಅವರು ಸಮಾಧಾನದಿಂದ ಈ ವ್ರತದ ವಿಸ್ತಾರವಾದ ವಿವರವನ್ನು ಕೊಟ್ಟರು.

"ಪುಷ್ಪಾದಿಗಳಿಂದ ಅಲಂಕರಿಸಲ್ಪಟ್ಟ ಕಲಶದಲ್ಲಿ 'ಅನಂತ'ನೆಂಬ ದೇವನನ್ನು ಆವಾಹನೆಮಾಡಿ ಭಕ್ತಿಯಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ದರ್ಭೆಗಳಿಂದ ಮಾಡಿದ ಆದಿಶೇಷನ 'ಫಣ'ವನ್ನು ಕಲಶದ ಮೇಲೆ ಅಲಂಕರಿಸಬೇಕು. ನಾನಾ ವಿಧವಾದ ಭಕ್ಷ್ಯಭೋಜ್ಯಗಳನ್ನು ಈ ವ್ರತದಲ್ಲಿ ಅನಂತನಿಗೆ ನಿವೇದಿಸಬೇಕಾಗುವುದು. ಇದಕ್ಕೆ 'ಅನಂತವ್ರತ' ಎಂದು ಹೆಸರು.

ಹದಿನಾಲ್ಕು ಗಂಟುಗಳನ್ನು ಹಾಕಿದ ಕೆಂಪುದಾರವನ್ನು ಭಗವಂತನಿಗೆ ಅರ್ಪಿಸಿ, ನಂತರ ವ್ರತದೀಕ್ಷೆಯ ಉದ್ದೇಶವಾಗಿ ಕೈಯಲ್ಲಿ ಕಂಕಣರೂಪವಾಗಿ ಧರಿಸುವುದು ಈ ವ್ರತದಲ್ಲಿ ಅಗತ್ಯ. ವ್ರತದ ಕೊನೆಯಲ್ಲಿ ವ್ರತ-ಕಥೆಯನ್ನೂ ಭಕ್ತಿಯಿಂದ ಶ್ರವಣ ಮಾಡಬೇಕಾಗುವುದು. ಈ ಪುಣ್ಯಪ್ರದವಾದ ವ್ರತಾನುಷ್ಠಾನ ಪ್ರಭಾವದಿಂದ ವ್ರತಿಯು ಸಮಸ್ತಪಾಪಗಳಿಂದ ಮುಕ್ತನಾಗಿ ಸದ್ಗತಿಯನ್ನು ಪಡೆಯುತ್ತಾನೆ"

ಅನಂತವ್ರತದ ವಿಶೇಷಫಲವನ್ನು ಸ್ತ್ರೀಯರಿಂದ ಶ್ರವಣಮಾಡಿದ 'ಶೀಲಾ' ಸಂತಸಗೊಂಡು ತಾನೂ ಈ ವ್ರತವನ್ನು ಆಚರಿಸುರಿಸುವುದಾಗಿ ನಿರ್ಧರಿಸಿ, ವ್ರತದೀಕ್ಷೆಯಧಾರವನ್ನು ಧರಿಸಿ ತನ್ನ ಮನೆಗೆ ಹಿಂದಿರುಗಿ, ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಅನಂತವ್ರತವನ್ನು ನಡೆಯಿಸಿದಳು.

ಈ ವ್ರತಪ್ರಭಾವದಿಂದ ಅವರ ಮನೆಯಲ್ಲಿ ಸುಖಸಂತೋಷಗಳು ನೆಲಸಿದ್ದಲ್ಲದೇ, ಸಿರಿ ಸಂಪತ್ತು ತಾಂಡವವಾಡಲಾರಂಭಿಸಿತು.



ಕೌಂಡಿನ್ಯನು ಒಂದು ದಿನ ತನ್ನಧರ್ಮಪತ್ನಿಯು ಕೈಯಲ್ಲಿ ಕಟ್ಟಿರುವ ಕೆಂಪುದಾರವನ್ನು ಕಂಡನು—"ಈ ದಾರ ತನ್ನ ವಶೀಕರಣಕ್ಕಾಗಿ ಧರಿಸಬಹುದು" ಎಂಬ ದುರ್ಭಾವನೆ ಆತನಿಗೆ ದುರ್ದೈವದಿಂದ ಉಂಟಾಯಿತು. ಒಡನೆಯೇ ಕೋಪದಿಂದ ಆ ದೀಕ್ಷಾದಾರವನ್ನು ಕಿತ್ತು ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿದನು. 'ಶೀಲಾ' ಪತಿಯ ಈ ದುಷ್ಕೃತ್ಯಕ್ಕಾಗಿ ವ್ಯಥೆಪಡುತ್ತಾ, ಉರಿಯುತ್ತಿರುವ ದಾರವನ್ನು ಹೊರಕ್ಕೆ ತೆಗೆದು ಕ್ಷೀರದಲ್ಲಿ ಮುಳುಗಿಸಿ ಬೆಂಕಿಯನ್ನು ಆರಿಸಿದಳು.

ಕೌಂಡಿನ್ಯನ ಕೋಪದಿಂದ ಉಂಟಾದ ಅಪರಾಧದ ಫಲವಾಗಿ ಪುನಃ ಈ ಸಂಸಾರ ದಾರಿದ್ರ್ಯಕ್ಕೆ ಸಿಕ್ಕಿನರಳುವಂತಾಯಿತು. ಇಷ್ಟು ಮಾತ್ರವಲ್ಲದೇ ಈತನ ವಿರೋಧಿಗಳೂ ಹೆಚ್ಚಾಗಿ ಬಹುವಾಗಿ ತೊಂದರೆ ಕೊಡಲಾರಂಭಿಸಿದರು. ತನ್ನ ಅನಿರೀಕ್ಷಿತವಾದ ದುಃಸ್ಥಿತಿಗೆ ನೊಂದ ಕೌಂಡಿನ್ಯನು 'ಶೀಲೆ'ಯನ್ನು ಕುರಿತು ತನ್ನ ಈ ದುರವಸ್ಥೆಗೆ ಕಾರಣವೇನೆಂದು ಕೇಳಿದನು.

"ಸ್ವಾಮಿ, ನನಗೆ ಇದರ ಕಾರಣದ ಪೂರ್ಣ ಅರಿವಿದೆ. ಕರುಣಾಳುವಾದ ಅನಂತನಿಗೆ ನಮ್ಮ ಮೇಲೆ ಕೋಪಬಂದಿದೆ. ನೀವು ಅಂದು ನನ್ನ ತೋಳಿಗೆ ಕಟ್ಟಿದ್ದ ಅನಂತ ದೇವನ ವ್ರತ ಪ್ರತೀಕವಾದ ದಾರವನ್ನು ಅಗ್ನಿಗೆ ಆಹುತಿಗೊಟ್ಟ ಈ ದುಷ್ಕೃತ್ಯ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ದಿಂದ ಅನಂತನು ಅಪಮಾನಿತನಾಗಿದ್ದಾನೆ ನಿಮ್ಮ ಈ ದುಷ್ಕೃತ್ಯಕ್ಕೆ ಮರುಗಿ ಭಕ್ತಿಯಿಂದ ಆದೇವನನ್ನು ಪ್ರಾರ್ಥಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾದರೆ ನಾವು ಮೊದಲಿನ ಸುಖವನ್ನು ಆ ದೇವಾಧಿದೇವನ ಕೃಪೆಯಿಂದ ಹೊಂದಬಹುದು'' ಎಂದು ತನ್ನ ನಿರ್ಧಾರವನ್ನು ಶೀಲೆ ಪತಿಗೆ ತಿಳಿಸಿದಳು.

ಕೌಂಡಿನ್ಯನು ಪತ್ನಿಯ ಮಾತಿನಿಂದ ಪ್ರಭಾವಿತನಾಗಿ ಅನಂತದೇವನನ್ನು ಕಾಣುವ ತವಕದಿಂದ ನಿರ್ಜನವಾದ ಅರಣ್ಯದಲ್ಲಿ ಅಲೆದಾಡ ತೊಡಗಿದನು. ದೇವನನ್ನು ಕಾಣುವ ಹುಚ್ಚು ಹೆಚ್ಚಾಗಿ ಕಂಡ ಕಂಡವರನ್ನೆಲ್ಲಾ ಪ್ರಶ್ನಿಸಲು ಆರಂಭಿಸಿದನು. ಮರ, ಹಸು, ಎತ್ತು ಇನ್ನೆಲ್ಲವನ್ನು ಪ್ರಶ್ನಿಸಿದರೂ ತಕ್ಕ ಉತ್ತರ ದೊರೆಯಲಿಲ್ಲ. ಕೊನೆಯಲ್ಲಿ ನಿರಾಶನಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾಗಿ ನಿಶ್ಚಯಿಸಿ ಹೊದ್ದ ಬಟ್ಟೆಯನ್ನು ಕತ್ತಿಗೆ ಬಿಗಿದು ಪ್ರಾಣತ್ಯಾಗಕ್ಕೆ ಸಿದ್ಧನಾದನು. ತನ್ನ ಭಕ್ತಳಾದ ಶೀಲೆಯ ಸೌಮಂಗಲ್ಯವನ್ನು ಕಾಯಲು ಇಚ್ಛಿಸಿದ ಕರುಣಾಳುವಾದ 'ಅನಂತಸ್ವಾಮಿ' ಮುದಿಬ್ರಾಹ್ಮಣನ ರೂಪದಲ್ಲಿ ಪ್ರತ್ಯಕ್ಷನಾಗಿ ಅವನ ಕೈಹಿಡಿದು ಸಮೀಪದ ಗುಹೆಯೊಂದರ ಒಳಕ್ಕೆ ಕರೆದು ಕೊಂಡು ಹೋಗಿ ತನ್ನ ನಿಜಸ್ವರೂಪವನ್ನು ತೋರಿದನು. ಅನಂತನ ಪ್ರತ್ಯಕ್ಷ ದರ್ಶನದಿಂದ ಸಂತಸಗೊಂಡ ಆತನು ಮನೆಗೆ ಹಿಂದಿರುಗಿ ತನ್ನ ಪತ್ನಿಯಾದ ಶೀಲಳನ್ನು ಕುರಿತು ಅರಣ್ಯದಲ್ಲಿ ನಡೆದ ಘಟನೆಯನ್ನೆಲ್ಲಾ ವಿವರಿಸಿದನು. ಅಂದಿನಿಂದ ಅವರು ಪ್ರತಿವರ್ಷವೂ ಭಾದ್ರಪದ ಶುದ್ಧ ಚತುರ್ದಶಿಯಂದು ಭಕ್ತಿಯಿಂದ ಅನಂತದೇವನ ವ್ರತವನ್ನು ಆಚರಿಸ ತೊಡಗಿ ಕೊನೆಯಲ್ಲಿ ಸದ್ಗತಿಯನ್ನು ಪಡೆದರು.

**ವಿದ್ವಾನ್ ಬಿ. ಬಾಲಗಣಪತಿ ಭಟ್ಟ**

(6ನೇ ಪುಟದಿಂದ)

ಜನತೆಯನ್ನು ಲೌಕಿಕಜೀವನದ ಕ್ಷುದ್ರ ಆಚಾರ – ವಿಚಾರಗಳಿಂದ, ಸ್ವಾರ್ಥವೇ ಮೊದಲಾದ ಬೋಧೆಗಳಿಂದ ಎಚ್ಚರಗೊಳಿಸಿ ಜೀವನದ ಧ್ಯೇಯದತ್ತ–ಗಮನ ಸೆಳೆಯುವುದೇ ದಾಸಸಾಹಿತ್ಯದ ಉದ್ದೇಶ. ಜನಸಾಮಾನ್ಯರಿಗೂ ಅರ್ಥವಾಗುವ ಸರಳ ಕನ್ನಡನುಡಿಯಲ್ಲಿ–ಎಲ್ಲರೂ ಕೇಳಿ ತಲೆದೂಗುವಂತಹ ವಿವಿಧ ರಾಗ–ತಾಳ–ಛಂದಸ್ಸುಗಳಲ್ಲಿ ಅವರು ಆದರ್ಶಜೀವನದ ರೀತಿ–ನೀತಿಗಳನ್ನು ಪ್ರಸಾರಮಾಡುತ್ತ – ಸಾಗಿದರು; 'ಕ್ಷಣಿಕತೆಯಿಂದ ಶಾಶ್ವತದೆಡೆಗೆ'– ಎಂಬ ಧ್ಯೇಯವುಳ್ಳ ಹರಿದಾಸರ ಸಾಹಿತ್ಯದಲ್ಲೆಲ್ಲ ಏಕಮುಖವಾದ ವಿಚಾರಧಾರೆಯೂ, ಒಂದು ನಿರ್ದಿಷ್ಟವಾದ ಧ್ಯೇಯವೂ ಕಂಡುಬರುತ್ತಿರುವುದು ಸ್ಪಷ್ಟ. ಈ ವಿಚಾರ – ಧ್ಯೇಯಗಳು ಲೌಕಿಕಜೀವನಕ್ಕೆ ವಿರೋಧಿಗಳಲ್ಲ, ಅದನ್ನು ಇನ್ನಷ್ಟು ಹಸನುಗೊಳಿಸಲೆಳಸುವ ಪ್ರಯತ್ನ – ಪ್ರಯೋಗಗಳು–ಎನ್ನುವುದೂ ನಿಜ

## ದಾಸ ಸಂಮಿತ :-
## ತತ್ತ್ವಸಂಹಿತೆ, ನೀತಿಸಂಹಿತೆ

ಕನಕದಾಸರು ತಮ್ಮ ಕೀರ್ತನೆಗಳಲ್ಲಿ – ಎರಡು ರೀತಿಗಳಿಂದ ವ್ಯಕ್ತಿಗೆ ಮಾರ್ಗದರ್ಶನ ಮಾಡಿದ್ದಾರೆ. ಒಂದು – ವ್ಯಕ್ತಿ – ಮತ್ತು ಪರಮಾತ್ಮ ಸಂಬಂಧಿಯಾದ – ವಿಚಾರಗಳು. ಇನ್ನೊಂದು ವ್ಯಕ್ತಿ ಮತ್ತು ಸಮಾಜ ಸಂಬಂಧಿಯಾದ – ವಿಷಯಗಳು. ಮೊದಲನೆಯದನ್ನು ಲಂಬಾತ್ಮಕ ಎಂದೂ, ಎರಡನೆಯದನ್ನು ಸಮಾನಾಂತರ – ಎಂದೂ ಕರೆಯಬಹುದು. ಒಂದು ವ್ಯಕ್ತಿಗತ ತತ್ತ್ವನಿಷ್ಠ ಇನ್ನೊಂದು ಸಮಾಜಿಕ ಆಚರಣೆ.

**ತತ್ತ್ವಸಂಹಿತೆ :**

ಸರ್ವೋತ್ತಮನಾದ ಹರಿಯನ್ನು ಸಾಕಾರ ರೂಪದಲ್ಲಿ ವರ್ಣಿಸಿ, ದೈವಶಕ್ತಿಗೆ ವಿವಿಧ ಮಾನವೀಯ ಸಂಬಂಧಗಳನ್ನು ಕಲ್ಪಿಸಿ, ಪ್ರೇಮಿಸಿ ಆ ಭಕ್ತಿಯ ಆನಂದವನ್ನು ತಾನು ಬೇರೆಯಾಗಿಯೇ ನಿಂತು ಸವಿಯುವುದು ವೈಷ್ಣವ ಭಕ್ತಿಯ ರೀತಿ. ಇವರು ವರ್ತಿಸುವ ಮುಕ್ತಿಸ್ಥಿತಿಯು ಅವರು ಅವಲಂಬಿಸಿದ ದ್ವೈತ ಸಿದ್ಧಾಂತಕ್ಕೆ ಅನುಗುಣವಾಗಿದೆ.

ತನು ನಿನ್ನದು ಜೀವನ ನಿನ್ನದು
ಅನುದಿನದಲಿ ಬಾಹೋ ಸುಖದುಃಖ
ನಿನ್ನದಯ್ಯಾ

ಮಾಯಾಪಾಶದ ಬಲೆಯೊಳಗೆ
ಸಿಲುಕಿರುವಂಥ
ಕಾಯ ಪಂಚೇಂದ್ರಿಯಂಗಳು ನಿನ್ನವು
ಕಾಯಜಪಿತ ಕಾಗಿನೆಲೆಯಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ...

ಎಲ್ಲವೂ ನಿನ್ನದು–ಹಾಗಾಗಿ ಎಲ್ಲವೂ ನಿನಗೇ ಸೇರತಕ್ಕದ್ದು–ಎಂಬ ಸರ್ವಾರ್ಪಣ ಭಾವ–ಭಕ್ತಿತತ್ತ್ವದ ಇನ್ನೊಂದು ಮುಖ್ಯ ಅಂಶ.

ಸದಾ ಸರ್ವಶಕ್ತನ ಸ್ಮರಣೆ – ದಾಸನ ಇನ್ನೊಂದು ಲಕ್ಷಣ.

ಸಂಸಾರ ಸಾಗರವನುತ್ತರಿಸುವಡೆ
ಕಂಸಾರಿ ನಾಮವೊಂದೆ ಸಾಕು ಮನವೆ.

ನಾಮಸ್ಮರಣೆ–ಪರಮಾತ್ಮ ಚಿಂತನೆಯು ಅತಿ ಸುಲಭ ಮಾರ್ಗ.

ಯತಿಯಾಗಬೇಡ, ವೈರಾಗ್ಯವನೆ ಪಿಡಿದು
ಸತತವ್ರತನ ಮಾಡಿದೆನೆಂಬ ಹಮ್ಮುಬೇಡ–
ಶ್ರುತಿಸ್ಮೃತಿಯ ನೋಡಿದೆನೆಂಬ
ಚೇಷ್ಟೆಯು ಬೇಡ
ರತಿ ಪತಿ ಪಿತ ನಾಮವೊಂದೇ
ಸಾಕು ಮನವೆ...

ಚಂಚಲನಾದ ಮನಸ್ಸನ್ನು ನಿಶ್ಚಲಗೊಳಿಸಿ ಭಗವಚ್ಚಿಂತನೆಗಾಗಿ ಕೇಂದ್ರೀಕರಿಸುವಲ್ಲಿ–'ನಾಮಸ್ಮರಣ'ಕ್ಕೆ ದಾಸರು ವಿಶೇಷ ಒತ್ತು ನೀಡಿದ್ದಾರೆ.

ಭಗವನ್ನಾಮ ಸಂಕೀರ್ತನೆಯೊಂದಿಗೆ ಭಗವತ್ಸ್ವರೂಪ ರಹಸ್ಯವನ್ನು ಕನಕದಾಸರು ವಿಶಿಷ್ಟವಾಗಿ ಚಿಂತಿಸಿದ್ದಾರೆ–

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ
ನೀ ದೇಹದೊಳಗೊ ನಿನ್ನೊಳು ದೇಹವೋ–

ಬಯಲೊಳಗೆ ಆಲಯವೋ,
ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯೊಳಗೊ ಬುದ್ಧಿ
ನಯನದೊಳಗೊ
ನಯನ ಬುದ್ಧಿಗಳೆರಡು
ನಿನ್ನೊಳಗೊ ಹರಿಯೇ

ಕುಸುಮದಲಿ ಗಂಧವೊ ಗಂಧದಲಿ
ಕುಸುಮವೊ
ಕುಸುಮ ಗಂಧಗಳೆರಡು ಆಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರಲೆನ್ನಳವಲ್ಲ – ಎಲ್ಲ ನಿನ್ನೊಳಗೊ
ಹರಿಯೆ !

ಕನಕದಾಸರು ಬೋಧಿಸಿದ ಸಾಧನ ಮಾರ್ಗದ ಪ್ರಮುಖ ನೆಲೆಗಳನ್ನು ಹೀಗೆ ಸಂಗ್ರಹಿಸಬಹುದು–

೧. ವಿಷಯ ವೈರಾಗ್ಯ— ಮನಸ್ಸನ್ನು ಚಂಚಲಗೊಳಿಸುವ ಬದುಕಿನ ಕ್ಷಣಿಕತೆ, ಕ್ಷಣಿಕ ತೃಪ್ತಿಗಳ ಕುರಿತು ತೀವ್ರ ವೈರಾಗ್ಯ ಸಾಧನೆ.

೨. ಸತ್ಕರ್ಮಾಚರಣೆ — ಗುರುಸೇವೆ ಸಜ್ಜನ ಸಂಗ, (ನಡೆಸುತ್ತ) ದಾನ, ಉಪಕಾರ, ವ್ರತ, ಯಾತ್ರೆಗಳ ಆಚರಣೆ.

೩. ಹರಿಮಹಿಮೆ ಅಥವಾ ಭಗವತ್ ಚಿಂತನೆ— ಜಿಜ್ಞಾಸಾಶ್ರವಣ–ಮನನ ಧ್ಯಾನರೂಪವಾದ ಚಿಂತನೆ.

೪. ಹರಿಭಕ್ತಿ–ಮತ್ತು ಅದರಿಂದ ಹರಿಯ ಅನುಗ್ರಹ ಪ್ರಸಾದಲಬ್ಧಿ – ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳ ಅನುಭವ– ಇದೇ ಮೋಕ್ಷ

ದಾಸರ ದೃಷ್ಟಿಯಲ್ಲಿ ಕರ್ಮಕ್ಕಿಂತಲೂ ಜ್ಞಾನ ಶ್ರೇಷ್ಠ. ಈ ಜ್ಞಾನಕ್ಕೆ ಭಕ್ತಿ ಹಿನ್ನೆಲೆಯಾಗಿರಬೇಕು. ಜ್ಞಾನವು ಗುರುಗಳಿಂದ ಲಭ್ಯವಾಗಬೇಕು. ಆಗಲೇ ಅದು ಫಲಪ್ರದ. ಇದರಿಂದ ಪ್ರಸನ್ನನಾದ ಹರಿಯು ಬಿಂಬಾಪರೋಕ್ಷ ರೂಪವಾದ ತನ್ನ ದರ್ಶನವನ್ನು ದಯಪಾಲಿಸುವನು– ಇದೇ ಜೀವನ್ಮುಕ್ತಿ.

ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ
ಕಳ್ಳರಿಗೆ ಕಳ್ಳನಂತೆ – ಬೆಳ್ಳಕ್ಕಿಯಂದದಿ ಡಂಭ–
ಗಾಣದೆತ್ತಿನಂತೆ ಕಣ್ಣು ಮುಚ್ಚಿ
ಪ್ರದಕ್ಷಿಣೆಯಮಾಡಿ
ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ
ಆಣಿಮುತ್ತ ಹಿಡಿದು ಹಿಡಿದು ಬಿಡುವಂತೆ
ಭ್ರಮಿತನಯ್ಯ–

ಗುಂಡು ಮುಳು ಗಿದ್ದುಕ್ಕಿಯಂತೆ ಕಂಡ
ಕಂಡ ನೀರ ಮುಳುಗಿ
ಮಂಡೆ ಕೂಲೆ ಬಾಹೋದಲ್ಲೆ ಗತಿಯ
ಕಾಣೆನೊ
ಮಂಡೂಕನಂದದಿ ನೀರತಡಿಯಲ್ಲಿ
ಕುಳಿತು ಹಾಗೆ
ಮುಂಡ ಮುಸುಗನಿಕ್ಕಿ ಮೂಗ ಹಿಡಿದು
ಬಿಡುವೆ ಭ್ರಮಿತನಯ್ಯ

ಇಕ್ಕಳದ ಕೈಲಿ ಪಿಡಿದ ಕಾದ ಕಬ್ಬಿಣದಂತೆ
ಸಿಕ್ಕಿ ಸಡಿಮಿಡಿಗೊಂಬೆ ಗತಿಯ ಕಾಣದೆ
ಹೊಕ್ಕಳಲ್ಲಿ ವಿನ ಕನಕನೊಡೆಯನಾದಿ
ಕೇಶವ–ಮರೆ
ಹೊಕ್ಕೆ ಎನ್ನ ಮನ್ನಿಸೊ ನೀ ದೇವ
ದೇವೋತ್ತಮ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

---

–ಎಂದು ತನ್ನ 'ಭಕ್ತಿ'–ಯನ್ನು ತಾನೇ ಪರೀಕ್ಷಿಸಿ ಗುರಿ ಮಾಡಿಕೊಳ್ಳುತ್ತಿರುವುದೂ ಭಕ್ತನ ವೈಶಿಷ್ಟ್ಯ.

ಏನುಮಾಡಲಯ್ಯ ಬಯಲಾಸೆ ಬಿಡದು
ಮಾನವ ಮೃಗೇಂದ್ರ ರಾಮಚಂದ್ರ
ರಕ್ಷಿಸಯ್ಯ
ತ್ವಕ್ಕು ಮೊದಲಾದ ಪಂಚೇಂದ್ರಿಯ
ದೊಳು ಸಿಕ್ಕಿ
ಕಕ್ಕುಲತೆಗೊಂಬುದಿದ ನೀನು ಬಿಡಿಸೊ
ಸಿಕ್ಕಿಸಿ ನೋಡದಿರು ಆದಿಕೇಶವರಾಯ
ದಿಕ್ಕಾಗಿ ನಿನ್ನಂಘ್ರಿಯೊಳಗಿರಿಸೆನ್ನ ಮನವ

ಎಂದು ತನ್ನ ಚಂಚಲವಾದ ಮನಸ್ಸನ್ನು ಹೀಗಳೆಯುತ್ತ–ಅದನ್ನು 'ನಿನ್ನಲ್ಲಿ ನೆಲೆಗೊಳಿಸುವಂತೆ ಮಾಡು' ಎಂದು ಬೇಡಿಕೊಳ್ಳುವುದನ್ನು ಗಮನಿಸಬಹುದು.

ವ್ಯರ್ಥವಾಯಿತಲ್ಲ ಜನ್ಮವು ಸಾರ್ಥಕಾಗಲಿಲ್ಲ-

ಅರ್ಥದಾಸೆಯಲಿ ಪೃಥ್ವಿಯೊಳಗೆ ಸುತ್ತಿ
ಮತ್ತನಾಗಿ ಬಲು ಕೃತ್ಯಗಳನಂ ಮಾಡಿ

ಜಪವಮಾಡಿದರೇನು– ತಪವ ಮಾಡಿದರೇನು-
ಕಪಟ ಗುಣ ವಿಪರೀತ ಕಲುಷವಿದ್ದವನು–

–ಎಂದು 'ಪಶ್ಚಾತ್ತಾಪ' ಪಡುವುದೂ ಚಿತ್ತಶುದ್ಧಿಯ ಇನ್ನೊಂದು ಬಗೆ. ಹೀಗೆ ವ್ಯಕ್ತಿ–ತನ್ನ ಅಂತರಂಗವನ್ನು ಶುದ್ಧಗೊಳಿಸಿ–ಅಲ್ಲಿ ಶ್ರೀರಂಗನನ್ನು ಸ್ಥಾಪಿಸಿ – ಅವನನ್ನು ನೆನೆಯುತ್ತಿರಬೇಕೆನ್ನುವುದು ದಾಸರು ಬೋಧಿಸುವ – ಭಕ್ತಿಯ ಸಾರಸರ್ವಸ್ವ.

### ನೀತಿಸಂಹಿತೆ :

ವ್ಯಕ್ತಿ ಸಮಾಜದಲ್ಲಿ ಹೇಗಿರಬೇಕು ?– ಅವನ ಆಚಾರ–ವಿಚಾರಗಳು ಹೇಗೆ ಸಂಸ್ಕಾರಗೊಂಡಿರಬೇಕು ? – ಎನ್ನುವುದನ್ನು ಕುರಿತೂ – ಕನಕದಾಸರು ಚಿಂತನೆ ನಡೆಸಿದ್ದಾರೆ–

ಗುರುಭಕ್ತಿ, ತಂದೆ–ತಾಯಿಗಳಲ್ಲಿ ವಿಧೇಯತೆ, ಸಜ್ಜನ ಸಹವಾಸ– ಸ್ತ್ರೀಯರಲ್ಲಿ ಗೌರವ–ದುಃಖವನ್ನು ಸಹಿಸುವ ತಾಳ್ಮೆ, ಭಕ್ತರಲ್ಲಿ ಕುಲ–ಜಾತಿಗಳನ್ನು ಗಮನಿಸದೆ ಸಮಾನಭಾವ ವಿಸ್ತರಿಸಬೇಕೆಂಬ ಸಮದರ್ಶಿತ್ವ, ಬಾಹ್ಯಾಡಂಬರವಿಲ್ಲದ ಸರಳತೆ, ಅರ್ಥದಾಸೆಯಿಂದ ಅಕೃತ್ಯಗಳನ್ನು ನಡೆಸಬಾರದೆನ್ನುವ ಎಚ್ಚರ, ಸಂಪತ್ತಿನ ಕುರಿತು ನಿರಹಂಕಾರ, ದಾನ ಧರ್ಮ ಪರೋಪಕಾರಗಳನ್ನು ನಡೆಸುವ ಉದಾರತೆ– ಮೊದಲಾದ– ವ್ಯಕ್ತಿಯ ಜೀವನವನ್ನು ಸಾರ್ಥಕಪ್ಪು, ಸಂಸ್ಕಾರಗೊಳಿಸುವ ನೀತಿ–ಮೌಲ್ಯಗಳನ್ನು ಕನಕದಾಸರು ಬೋಧಿಸಿದ್ದಾರೆ. ಈ ನೀತಿ ಸಂಹಿತೆ–ಇಂದಿಗೂ–ಮುಂದಿಗೂ– ಅಗತ್ಯವಾದದ್ದೇ, ಆಚರಣೀಯವಾದದ್ದೇ.

ನುಡಿ ನಡೆದ ಕಾಲದಲಿ ದಾನ
ಧರ್ಮ ಮಾಡದೆ
ಅಡವಿಯೊಳು ಕೆರೆ ತುಂಬಿ ಬತ್ತುವಂತೆ
ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ
ಹಿಡಿಯಲಾ ಯಮನವನರ ಕಟ್ಟಿಗೊಳಗಾಗಿ

* * * *

ದಾನ ಧರ್ಮವ ಮಾಡಿ
ಸುಖಿಯಾಗು ಮನವೆ,
ಹೀನ ವೃತ್ತಿಯಲಿ ನೀ ಕೆಡಬೇಡ ಮನವೆ

* * * *

ಮಾಡು ದಾನ ಧರ್ಮ ಪರ ಉಪಕಾರವ
ಮರೆಯದಿರೆಚ್ಚರಿಕೆ–
ಕೇಡ ನೆನೆಯಬೇಡ, ನಂಬಿದವರ ಮೇಲೆ
ಕೆಡುವೆ ನೀನೆಚ್ಚರಿಕೆ

–ಇವೆಲ್ಲವೂ ಸಾರ್ವಕಾಲಿಕವಾದ 'ನೀತಿಗಳೇ'.

ಲೌಕಿಕವಾದ ಒಂದು ವಿಚಾರವನ್ನು–ಕನಕದಾಸರು–ಹೇಗೆ ವರ್ಣಿಸಿ– ಗೇಲಿಮಾಡಿದ್ದಾರೆನ್ನುವುದನ್ನು ಇಲ್ಲಿ ಉಲ್ಲೇಖಿಸಬಹುದು–

ಮಾವನ ಮನೆಯೊಳಗೆ ಇರಬಹುದೆ
ಕೋವಿದರು– ॥ ಪ ॥

ಒಂದೊಂದು ತಿಂಗಳು ಬಹುಮಾನ
ನಡತೆಗಳು
ಒಂದೆರಡು ತಿಂಗಳೊಳಗೆ ಹಿತವಾದನೆ
ಒಂದೊಂದ ಭದ್ರಮಾಡಿ ಒಳಗೊಳಗೆ
ಹುಟ್ಟಿದುವು
ಸಂದೇಹವೇಕೆ ಸಂಸಾರಿಗಳಿಗೆ ॥ 1 ॥

ಮಾವ ಅತ್ತೆಯು ನೊಂದು, ಅತ್ತಿಗೆಯು
ತಾ ಜರಿದು
ಹ್ಯಾವನಾಗಿಕ್ಕಿ ಚೂರ್ಣವ ಮಾಡಲು
ಯಾವಾಗ ನೋಡಿದರು ಎನಗೆ ಹಿತರಲ್ಲೆಂದು
ಮಾವ ಹೊರಗಾಡುವನು ಚಿಕ್ಕ ನುಡಿಗಳನು
॥ 2 ॥

ಈ ಪರಿಯ ಉಂಬಂಥ ಅಳಿಯ
ಭೋಜನಕಿಂತ
ಗೋಪಾಲ ಲೇಸು ಅಭಿಮಾನಿಗಳಿಗೆ
ಶ್ರೀಪತಿ ನೆಲೆಯಾದಿ ಕೇಶವನ ಚರಣವ ಬ
ಹು ಪರಿಯಲಿ ಭಜಿಸು ಸುಖಿಯಾಗು ಮನವೆ
॥ 3 ॥

–ಕನಕದಾಸರ ಈ 'ವಿಚಾರಧಾರೆ'– ಇಂದಿಗೂ ಪ್ರಸ್ತುತವಾದದ್ದು ಎನ್ನುವುದರಲ್ಲಿ ಸಂದೇಹವಿದೆಯೆ ? ಇದನ್ನಲ್ಲವೇ ದಾಸಭಾವ ಸೇವಾಭಾವವೆನ್ನುವುದು.

(ಕನಕದಾಸ ವಾದಿರಾಜ ಆರಾಧನೆಯಲ್ಲಿ ಮಾಡಿದ ಉಪನ್ಯಾಸದ ಸಾರಾಂಶ).

(8 ನೇ ಪುಟದಿಂದ)

ದಲ್ಲಿ ಸಾಮರ್ಥ್ಯವನ್ನು, ವೇದಾಂತ ಪ್ರಪಂಚ ದಲ್ಲಿ ವಿನೂತನತೆಯನ್ನು ತುಂಬಿದ್ದಾರೆನ್ನಬಹುದು.

ಕನಕದಾಸರ ಎರಡನೇ ಕೃತಿ 'ಹರಿಭಕ್ತಿಸಾರ' ವು ನೂರೆಂಟು ಪದ್ಯಗಳುಳ್ಳ ಭಕ್ತಿಸಾರದ ಚರಿತೆಯಾಗಿದೆ. ಭಾಮಿನೀ ಷಟ್ಪದಿಯಲ್ಲಿ ಲಲಿತ ಪದ ಬಂಧದಲ್ಲಿ ಭಕ್ತಿ ತತ್ತ್ವದ ಶ್ರೇಷ್ಠತೆಯನ್ನು ಸೊಗಸಾಗಿ ಮನಂಬುಗುವಂತೆ ನಿರೂಪಿಸಿರುವದರಿಂದ ಕೀರ್ತನೆಗಳಂತೆ ಇದೂ ಬಹಳ ಜನಪ್ರಿಯವಾಗಿದೆ. ಇದನ್ನು ದಾಸರು ಬೇಲೂರಿನಲ್ಲಿ ರಚಿಸಿರುವುದು ಅದರ ಅಂಕಿತ 'ಪುರವುರ ನಿಲಯ ಚೆನ್ನಿಗರಾಯ' ಎಂಬುದರಿಂದ ತಿಳಿಯಬಹುದು. ಇದರಲ್ಲಿರುವ ಉಪದೇಶಗಳು ಕನಕದಾಸರ ಪಾಂಡಿತ್ಯ, ಅನುಭವ, ದೈವಭಕ್ತಿ, ಭೂತಾನುಕಂಪೆ ಮತ್ತು ಮುಮುಕ್ಷುಭಾವಗಳನ್ನು ಚೆನ್ನಾಗಿ ಅಭಿವ್ಯಕ್ತಗೊಳಿಸುತ್ತವೆ. 'ಸತ್ಯವಿಗಳಿವರಗ್ಗಳಿಕೆ ಎನಗಿನಿತಿಲ್ಲ, ನಿನ್ನ ನಾಮಾವಳಿಯ ಪೊಗಳಿಕೆಯಿತ್ತು ರಕ್ಷಿಸು, ಬಸುರೊಳಗೆ ಬ್ರಹ್ಮಾಂಡ ಕೋಟಿಯ ಪಸರಿಸಿದ ಪರಮಾತ್ಮ ನೀನು, ನೀನೊಲಿಯದಿನ್ನಿಲ್ಲ, ಇದಕನುಮಾನವುಂಟೇ ಭ್ರಮರ ಕೀಟ ನ್ಯಾಯದಂದದಲಿ, ಎಷ್ಟುಮಾಡಲು ಮುನ್ನ ತಾ ಪಡೆದಷ್ಟೇ ಎಂಬುದು ಲೋಕದೊಳು ಮತಿಗೆಟ್ಟ ಮಾನವರಾಡತಿಹುದು, ನಿನ್ನ ನಾಮವೊಳಗೆರಡಕ್ಷರವ ಬಣ್ಣಿಸುತ। (ವಾಲ್ಮೀಕಿ) ಮುನಿಕುಂದಿ ಸಂಪನ್ನನಾದ, ಇಲ್ಲಿಹನು ಅಲ್ಲಲ್ಲಿವೆಂಬೀ ಸೊಲ್ಲು ಸಲ್ಲದು, ಹಸುತನ್ನ ಕಂದನ ಮರೆವುದೇ?, ಈಗಲೋ ಈ ದೇಹವಿನ್ನಾವಾಗಲೋ?, ದೇಹದಲುಂಟೆ ಫಲ ಪುರುಷಾರ್ಥ?, ಮುಕ್ತಿಗೆ ಭಕ್ತಿಯೇ ಕಾರಣವು, ನೀರ ಮೇಲಣ ಗುಳ್ಳೆಯಂದದಿ ತೋರಿ ಅಡಗುವ ದೇಹ, ಊರು ತನಗೊಂದಿಲ್ಲ, ದರ್ಪಣದ ಮೇಲೆ ಉದ್ದುರುಳಿ ಬೀಳ್ವಂತೆ ಜೀವನಬಾಳು, ಗಾಳಿಗೊಡ್ಡಿದ ಸೊಡರು ಈ ಸಂಸಾರ, ಸತ್ತವರಿಗಳಲೇಕೆ? ಎಲ್ಲರೂ ಸತ್ತು ಹೋಗದೆ ಉಳಿವರೆ? ಬೀಜ ವೃಕ್ಷದೊಳಾಯ್ತೊ ವೃಕ್ಷಕೆ ಬೀಜವಾದುದಾಯ್ತೋ ಇದ ಭೇದಿಸುವರಾರಿನ್ನು?, ಬೀಗ ಮುದ್ರೆಗಳಿಲ್ಲದೂರಿಗೆ ಬಾಗಿಲುಗಳೊಂಬತ್ತು, ಹಗಲಿರುಳೆನ್ನದೆ ಬಾಗಿಲು ಮುಚ್ಚದೆ ತೆರೆದಿಹುದು ಈ ದೇಹವಿಂತಿದೆ. "ಈ ರೀತಿಯ ಉಪದೇಶಪರ ಮಾತುಗಳು ಶ್ರೀ ಸಾಮಾನ್ಯನ ನಿತ್ಯಜೀವನದ ಭವ್ಯತೆಗೆ ದಾರಿದೀಪಗಳಾಗಿ ಮೂಡಿಬಂದಿವೆ.

'ಮೋಹನ ತರಂಗಿಣಿ' ಸಾಂಗತ್ಯ ಛಂದಸ್ಸಿನಲ್ಲಿ ರಚಿಸಿದ ಶ್ರೀಕೃಷ್ಣ ಚರಿತ್ರೆಯಾಗಿದೆ. ಗುಣದ ವಿಷಯದಲ್ಲಿ ಹಿರಿಮೆ ಪಡೆದ ಇದು ಪ್ರಿಯವಾದ ಒಂದು ಕಾವ್ಯವೆಂಬುದನ್ನು ಯಾರಾದರೂ ಒಪ್ಪಲೇಬೇಕು. ೧೬೫೮ ಪದ್ಯಗಳು ಇದರಲ್ಲಿದೆ, ರುಕ್ಮಿಣಿಯನ್ನು ಕೃಷ್ಣನು ಮದುವೆಯಾದ ಸಂದರ್ಭದಿಂದ ಕಾವ್ಯ ಆರಂಭವಾಗಿ ದ್ವಾರಕೆಯಲ್ಲಿ ಅನಿರುದ್ಧನ ಹೆಂಡತಿ ಉಷಳನ್ನು ತಂದುಕೊಂಡು ಮನೆ ತುಂಬಿಸಿಕೊಳ್ಳುವ ಸಂದರ್ಭದಲ್ಲಿ ಮುಗಿಯುತ್ತದೆ. ಇದರಲ್ಲಿ ತುಂಬ ಸ್ವಾರಸ್ಯವಾದ ವರ್ಣನೆ, ಘಟನೆಗಳಿವೆ. ಆದರೆ ಇದು ಪ್ರೌಢ ಕಾವ್ಯವಾದುದರಿಂದ ಅಷ್ಟಾಗಿ ಬಳಕೆಗೆ ಬಂದಿಲ್ಲ

'ಶ್ರೀರಾಮ ಧಾನ್ಯ ಚರಿತ್ರೆ'ಯು ವಿಲಕ್ಷಣವಾದ ಕೃತಿ. 'ಶ್ರೀರಾಮನು ಲಂಕೆಯಿಂದ ಸೀತಾಸಮೇತನಾಗಿ ಬರುತ್ತ ಕರ್ನಾಟಕದಲ್ಲಿರುವ ಋಷ್ಯಾಶ್ರಮದಲ್ಲಿ ಆತಿಥ್ಯ ಪಡೆದು ಇಲ್ಲಿನ ಭಕ್ಷ್ಯ ಭೋಜ್ಯಗಳಿಗೆ ಮೆಚ್ಚಿ ಋಷಿಗಳು ಮಾಡಿದ ಔತಣದಲ್ಲಿ ನರೆದಲೆಗಕ್ಕಿ ವ್ರೀಹಿಗೂ ತಾನು ಹೆಚ್ಚು ತಾನು ಹೆಚ್ಚೆಂದು ಜಗಳನಡೆದು ನರೆದಲೆಗಕ್ಕೆ ಜಯವಾಗಲು ರಾಮನು ಅದಕ್ಕೆ 'ರಾಘವ' ಎಂಬ ಹೆಸರನ್ನಿಟ್ಟನು' ಎಂಬ ವಿಷಯವನ್ನು ಆಧಾರವಾಗಿಟ್ಟುಕೊಂಡು ದೇವರು ಭಕ್ತರ ಭಕ್ತನೆಂಬುವ ತತ್ತ್ವವನ್ನು ಸೂಚಿಸಿದ್ದಾರೆ.

ಕನಕದಾಸರದೆಂದು ಹೇಳಲಾಗುವ 'ನೃಸಿಂಹಸ್ತವ'ವೂ ಸಾಂಗತ್ಯದಲ್ಲಿ ಹೇಳಿದ ಒಂದು ಚಿಕ್ಕಗ್ರಂಥ.

ಇನ್ನು ಉಳಿದುದೆಂದರೆ ಅವರ ನಳಚರಿತ್ರೆ. ಇದು ವರಪುರದ ಚೆನ್ನಿಗರಾಯನ ಅಂಕಿತದಲ್ಲಿ ಹೇಳಿದ ಸೊಗಸಾದ ಲೌಕಿಕಕಾವ್ಯಚಿತ್ರಣವನ್ನಿತ್ತ ಸುಂದರಕಾವ್ಯ. ಕಾವ್ಯದ ಪ್ರಾರಂಭದ ಮೊದಲು ಮೂರು ಪದ್ಯಗಳಲ್ಲಿ ಕವಿ ತನ್ನ ಅಧಿದೈವವಾದ ಚೆನ್ನಿಗರಾಯನನ್ನು ಹೊಗಳಿ ಹಾಡಿದರೂ ಆ ಮೇಲೆ ಕ್ರಮವಾಗಿ ವಿದ್ಯಾವಾರಿಧಿಯಾದ ಶಾರದೆಯನ್ನು, ವಿಘ್ನ ನಿವಾರಕನಾದ ಗಣಪತಿಯನ್ನು ಪ್ರಾರ್ಥಿಸುತ್ತಾನೆ ಪ್ರತಿಸಂಧಿಯ ಕೊನೆಯಲ್ಲಿ ಚೆನ್ನಿಗರಾಯನನ್ನು ಸ್ಮರಿಸಿದ ಸಂಪ್ರದಾಯವು ಕನಕದಾಸರ ಪ್ರಾಂಜಲ ಭಕ್ತಿಗೆ ಕೊಟ್ಟ ಮುಡಿಪು.

ನಳಚರಿತ್ರೆಯ ಕಥನರೀತಿಯಲ್ಲಿ ಆಡಂಬರವಿಲ್ಲ. ಸರಳತೆಯಿದೆ. ನಿರೂಪಣೆಯಲ್ಲಿ ವ್ಯಂಗವಿಲ್ಲ, ಸ್ಪಷ್ಟತೆಯಿದೆ. ಹೇಳುವ ಕ್ರಮದಲ್ಲಿ ಬಳಸು ಹಾದಿಯಿಲ್ಲ, ನೇರವಿದೆ, ಅತಿಶಯೋಕ್ತಿಯ ಹೆಚ್ಚಳವಿಲ್ಲ. ಸ್ವಭಾವಚಿತ್ರದ ಸುಳಿವಿದೆ. ವರ್ಣನೆಯಿದ್ದರೂ 'ಅಯ್ಯೋ ಸಾಕು' ಎನಿಸುವಷ್ಟಿಲ್ಲ, ಇನ್ನು ಸ್ವಲ್ಪ ಇದ್ದರಾಗುತ್ತಿತ್ತು ಎನಿಸುವಂತಿದೆ. ಮೂಲೆ ಮೂಲೆಯ ಅಲಂಕಾರಗಳ ಸುಳಿಗೆ ಕಾವ್ಯ ಸಿಕ್ಕಿಲ್ಲ. ರುಚಿ ತೋರುವಷ್ಟು ಮಾತ್ರ ಸುಳಿದಾಡಿವೆ.

ಕನಕದಾಸರು ಒಬ್ಬ ಭಕ್ತ ಕವಿ ಭಗವದ್ದೃಷ್ಟಿ ಅವರ ದರ್ಶನ. ಮಾನವ ವ್ಯಾಪಾರವೆಲ್ಲ 'ವಿಧಿವಶ' ಎಂದುಕೊಂಡವರು. ಪುರಾಕೃತವನ್ನು ಮೀರಲು ಸಾಧ್ಯವಿಲ್ಲವೆಂದವರು. 'ಗತಿಗೆಕಾರಣ ಸತ್ಯವೇ' ಎಂಬುದನ್ನು ಮನಗಂಡವರು. ಅವರು ಸೃಷ್ಟಿಸಿದ ಪಾತ್ರಗಳೆಲ್ಲವೂ ಅದರ ಅಕ್ಷದಲ್ಲಿಯೇ ತಿರುಗುವವುಗಳು. ನಳನು 'ಪನ್ನಗಾಂಧ್ಯಜನ ಕೃಪೆ ತನಗಿನ್ನು ತಪ್ಪಿದ ಬಳಿಕ ಲೋಕದೊಳಿನ್ನು ಸೈರಿಸಲಾರವಶ" ಎಂದುಕೊಳ್ಳುತ್ತಾನೆ. ದಮಯಂತಿ ಮನದಲ್ಲಿ ಅಚ್ಯುತನ ನೆನೆಯುತ್ತ ಕಣ್ಣು ಮುಚ್ಚಿದಾಗ ಮದಗಜಗಳು ತಮಗೆ ತಾವೇ ಹಿಂತಿರುಗಿ ಹೋದುವಂತೆ. ರೋಮಶನೂ 'ದೈವವ ನೆನೆವ ಭಕ್ತರಿಗುಂಟೆ ಭಯ?' ಎಂಬುದನ್ನು ನಂಬಿದವನು. ಹೀಗೆ ಕವಿಯ ಕಾಣ್ಕೆಯಾದ ಭಗವದ್ಭಕ್ತಿ ಕಾವ್ಯದ ಉದ್ದಕ್ಕೂ ಕಂಡು ಬರುತ್ತದೆ.

ಈ ರೀತಿಯಾಗಿ ಕನಕದಾಸರು ಇಷ್ಟದಿಂದ ಭಾಗವತರಾಗಿ, ಕಟ್ಟಕಡೆಗೆ ದೇವರನ್ನು ಕಂಡವರಾಗಿ ಪುಣ್ಯಶ್ಲೋಕರೆನಿಸಿದರು. ಸುಮಾರು ೯೮ ವರ್ಷಗಳ ಕಾಲ ಈ ನಾಡಿನಲ್ಲಿ ಜೀವಿಸಿ ಜನ ಜೀವನದಲ್ಲಿ ಚೈತನ್ಯವನ್ನು, ಸಾಹಿತ್ಯದಲ್ಲಿ ಸಾಮರ್ಥ್ಯವನ್ನು, ಪ್ರಪಂಚದಲ್ಲಿ ವಿನೂತನತೆಯನ್ನು ಉಂಟುಮಾಡಿದರು. ಜಗನ್ನಾಥದಾಸರು 'ಆಸೆಯನು 'ಗೆದ್ದವರು ದಾಸರಾಗಲರ್ಹರು' ಎಂಬ ಮಾತನ್ನ ಕನಕದಾಸರ ಪೂರ್ವೋದಾಹರಣೆ ದೃಷ್ಟಿಯಲ್ಲಿಟ್ಟುಕೊಂಡೇ ಹೇಳಿರಬಹುದು. ಇಂಥ ದಾಸವರೇಣ್ಯ ಕನಕದಾಸರಿಗೆ ಕನ್ನಡ ನಾಡಿನಲ್ಲಿ, ಕನ್ನಡ ಜನತೆಯಿಂದ ಸಲ್ಲಬೇಕಾದ ಗೌರವ, ಮಹತ್ವಗಳು ದೊರೆತಿಲ್ಲವೆಂಬುದು ಸತ್ಯವೂ ಹೌದು, ಶೋಚನೀಯವೂ ಹೌದು. ಕನಕದಾಸರ ಜಯಂತಿ; ಆರಾಧನಾ ಮಹೋತ್ಸವಗಳು ಹೆಚ್ಚಾಗಿ ನಡೆಯುತ್ತಿಲ್ಲವೆಂಬುದು. ವಿಷಾದನೀಯ ಹರಿಯೇ ನಿನ್ನನು ಒಲಿಸಬಹುದು. ಈ ನರನನು ಒಲಿಸುವುದು ಅತಿ ಕಷ್ಟ ಎಂದು ಪುರಂದರದಾಸರು ಹೇಳಿರುವ ಮಾತು ಈ ದೃಷ್ಟಿಯಿಂದ ಸತ್ಯವೇ ಆಗಿದೆ.

---

(24 ನೇ ಪುಟದಿಂದ

ಎಲ್ಲಾ ಇದ್ದರೂ ಸರಿಯಾದ ಬುದ್ಧಿ ಇಲ್ಲದಿದ್ದ ಪಕ್ಷಕ್ಕೆ ಇವುಗಳ ದುರುಪಯೋಗ ಮಾಡಿಕೊಳ್ಳುತ್ತಾನೆ. ಹೀಗಾಗದಂತೆ ತಿಳಿಯಹೇಳುವುದೇ 'ಮೇಧಸ್ಸೆ'ಂಬ ಬುದ್ಧಿ. ಬುದ್ಧಿಗೆ ಪ್ರೇರಣೆಯನ್ನು ಅಷ್ಟಾಂಗ ಯೋಗಗಳಿಂದ ಯಮ, ನಿಯಮ, ಆಸನ, ಪ್ರಾಣಾಯಾಮ ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳ—ಆಚರಣೆಯಿಂದ ಪಡೆಯಬಹುದು. ಅದ್ದರಿಂದ ಧರ್ಮಸಾಧನವಾದ ಬುದ್ಧಿಗೆ ಪ್ರೇರಣೆಯನ್ನು ಕೊಡುವಂತೆ ನಾವು ಮಹಾಚೇತನವನ್ನು ಕೇಳಬೇಕೇ ಹೊರತು ಐಹಿಕ ವಸ್ತುಗಳನ್ನಲ್ಲ.

ಜೀವನಸಾರ್ಥಕ್ಯವು ಮೇಲ್ಕಂಡ ಅಂಶಗಳ ಅರಿವು ಮತ್ತು ಆಚರಣೆಯಲ್ಲಿದೆಯೇ ಹೊರತು ಬೋಧನೆಯಲ್ಲಿ ಮಾತ್ರವಲ್ಲ 'ಚರ್ಮತೊಳೆದರೆ ಕರ್ಮ ಹೋಗದು'— ಎಂಬಂತೆ ಮನಸ್ಸನ್ನು ಪರಿಶುದ್ಧವಾಗಿಸಿಕೊಳ್ಳಬೇಕು.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಸಪ್ತಗಿ

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು 18-9-86

* ಕರ್ನಾಟಕದ ಕೋಲಾರ ಜಿಲ್ಲೆಯ ಗುಟ್ಟಹಳ್ಳಿಯಲ್ಲಿ (ಬಂಗಾರು ತಿರುಪತಿ) ತಿ. ತಿ. ದೇ. ಕಲ್ಯಾಣ ಮಂಟಪವನ್ನು ಸ್ಥಳೀಯರು ಸ್ಥಳದಾನದೊಳಗೆ ನಿರ್ಮಾಣವೆಚ್ಚದ ಅರ್ಧಭಾಗವನ್ನು ನೀಡಿದಲ್ಲಿ ಮಿಕ್ಕ 50% ಹಣವನ್ನು ನೀಡಿ ನಿರ್ಮಿಸಲು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* ಪ್ರಕಾಶಂಜಿಲ್ಲೆಯ ಯದ್ದನಪೂಡಿಯಲ್ಲಿ ತಿ. ತಿ. ದೇ ಕಲ್ಯಾಣ ಮಂಟಪವನ್ನು ನಿರ್ಮಿಸಲು ತೀರ್ಮಾನಿಸಿ ಇದಕ್ಕಾಗಿ ಅಲ್ಲಿನ ಪಂಚಾಯತಿಯಿಂದ ಒಂದು ಎಕರೆ ಸ್ಥಳ ಹಾಗೂ ಶ್ರೀಮತಿ ಗೊಟ್ಟಿಪಾಟಿ ಭಾರತಮ್ಮ ಅವರಿಂದರೂ 10.000/ ವಿರಾಳವನ್ನೂ ಸ್ವೀಕರಿಸಲು ತೀರ್ಮಾನಿಸಲಾಯಿತು.

* ಬಸ್ವಾಡ ಗ್ರಾಮದಲ್ಲಿ ತಿ ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* ಬನಗನಪಲ್ಲಿ (ಕರ್ನೂಲುಜಿಲ್ಲೆ)ಯಲ್ಲಿ ತಿ ತಿ.ದೇ. ಕಲ್ಯಾಣ ಮಂಟಪ ನಿರ್ಮಿಸಲು ತೀರ್ಮಾನಿಸಲಾಯಿತು

* ಆಂಧ್ರಪ್ರದೇಶದ ಸರ್ಕಾರದ ಆದೇಶದಂತೆ ಗ್ರೂಪ್ ಇನ್ಷೂರೆನ್ಸ್ ಪದ್ಧತಿಯನ್ನು ತಿ. ತಿ ದೇವಸ್ಥಾನಗಳ ಉದ್ಯೋಗಿಗಳಿಗೂ ಅನ್ವಯಿಸಲು ಒಪ್ಪಲಾಯಿತು.

* ಸಂಸ್ಕೃತ, ಹಿಂದಿ, ತೆಲುಗುಗಳಲ್ಲಿನ ಆಸಕ್ತಿಯನ್ನು ಹೆಚ್ಚಿಸಲೆಂದು ತಿ.ತಿ.ದೇ ಗಳ ಓರಿಯಂಟಲ್ ಕಾಲೇಜಿನ ಸದರಿ ವಿದ್ಯಾರ್ಥಿಗಳಿಗೆ ನೀಡುವ ಸ್ಟೈಫಂಡ್ ಹಾಗೂ ವಿದ್ಯಾರ್ಥಿ ನಿಲಯ ಸದುಪಾಯಗಳ ಬಗ್ಗೆ ನೀತಿ ನಿಯಮಗಳನ್ನು ರೂಪಿಸಿ ಅಂಗೀಕರಿಸಲಾಯಿತು.

* ತಿರುಪತಿಯ ಎಸ್. ವಿ. ಆಯುರ್ವೇದ ಕಾಲೇಜಿನ ಕೆಲವು ಹುದ್ದೆಗಳನ್ನು ಶಾಶ್ವತ ಪ್ರತಿಪಾದಿಕೆಯ ಮೇಲೆ ಮುಂದುವರಿಸಲು ತೀರ್ಮಾನಿಸಲಾಯಿತು.

* ವಿಷ್ಣುಪುರಾಣ (ಸಂಸ್ಕೃತ) ತಿರುಮಲೈ ಒಳುಗು ಅಷ್ಟಾದಶ ರಹಸ್ಯ (ತಮಿಳು) ಕೃತಿಗಳನ್ನು ತೆಲುಗು ಅನುವಾದ ಮಾಡಿ ಪ್ರಕಟಿಸಲು ತೀರ್ಮಾನಿಸಲಾಯಿತು.

* ತಿರುಪತಿಯ ವಿನಾಯಕ ನಗರದಲ್ಲಿನ ಸ್ಥಳವನ್ನು ಲೀಸ್‌ಗೆಂದು ಇಸ್ಕಾನ್ ಹರೇ ರಾಮ ಹರೇ ಕೃಷ್ಣ ಸಂಘದವರಿಗೆ ನಾಮಮಾತ್ರ ಬಾಡಿಗೆಯಲ್ಲಿ ನೀಡಲು ತೀರ್ಮಾನಿಸಲಾಯಿತು.

* ಖಮ್ಮಂನ ತಿ. ತಿ. ದೇ. ಕಲ್ಯಾಣಮಂಟಪದ ಸ್ಥಳೀಯ ಸಲಹಾಮಂಡಳಿಯನ್ನು ನಾಮಕರಣ ಮಾಡಲು ತೀರ್ಮಾನಿಸಿ ಮೂರುವರ್ಷಗಳ ಕಾಲಕ್ಕಾಗಿ 9 ಮಂದಿಯ ಸಮಿತಿಯನ್ನು ನಿಯಮಿಸಲಾಯಿತು.

* ರಾಷ್ಟ್ರ ವಿಧಾನ ಮಂಡಲಿಯ ಸಲಹೆಯಂತೆ ತಿ. ತಿ. ದೇ. ಕಲ್ಯಾಣಮಂಟಪಗಳ ಸ್ಥಳೀಯ ಸಲಹಾಮಂಡಲಿಯಲ್ಲಿ ಸ್ಥಳೀಯ ಶಾಸನ ಸಭಾ ಸದಸ್ಯರನ್ನು ಅಥವಾ ಸ್ಥಳೀಯ ಸಮಿತಿಯ ಅಧ್ಯಕ್ಷರನ್ನೂ ಸೇರಿಸಬೇಕೆಂಬ ನಿರ್ಣಯವನ್ನು ಕೈಗೊಳ್ಳಲಾಯಿತು.

* ದೆಹಲಿಯ ಆದಿಶಂಕರ ವಿಮಾನ ಸಮಿತಿಯವರಿಗೆ ಅಲ್ಲಿನ ಸ್ವಾಮಿಯ ಸೇವೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿಯ ಶೇಷವಸ್ತ್ರಗಳನ್ನು (ಒಂದು ಮೇಲ್ಚಾತ್ತು ಹಾಗೂ ಎರಡು ಜರಿ ದುಪ್ಪಟ್ಟಿಗಳನ್ನು) ನೀಡಲು ತೀರ್ಮಾನಿಸಿದ್ದನ್ನೂ, ಶ್ರೀ ಪೆರಂಬದೂರಿನ ಶ್ರೀ ಆದಿಕೇಶವ ಪೆರುಮಾಳ್ ಹಾಗೂ ಶ್ರೀ ಭಾಷ್ಯಕಾರಸ್ವಾಮಿ ದೇವಾಲಯಕ್ಕೆ ಸ್ವಾಮಿಯ ಒಂದು ಮೇಲ್ಚಾತ್ತನ್ನು ನೀಡಲು ತೀರ್ಮಾನಿಸಿದ್ದನ್ನೂ ಅಂಗೀಕರಿಸಲಾಯಿತು.

* ಹರಿಜನ ಗಿರಿಜನ ವಾಡೆಗಳಲ್ಲಿನ ದೇವಾಲಯಗಳಿಗೆ ಉಚಿತವಾಗಿ ಸೀತಾರಾಮ ಲಕ್ಷ್ಮಣ ಹಾಗೂ ವೆಂಕಟೇಶ್ವರಸ್ವಾಮಿ ವಿಗ್ರಹಗಳನ್ನು ತಯಾರಿಸಿ ನೀಡಲು ತೀರ್ಮಾನಿಸಲಾಯಿತು.

* ಗುಂಟೂರು ಜಿಲ್ಲೆಯ ಭಟ್ಟಿಪ್ರೋಲು ವಿನಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.



## ತಿ. ತಿ. ದೇವಸ್ಥಾನಗಳ ಟ್ರಸ್ಟ್ ಬೋರ್ಡ್ ಹೊಸ ಸದಸ್ಯರು

ಶ್ರೀ ಡಿ ಸೀತಾರಾಮಯ್ಯ
ಅಧ್ಯಕ್ಷರು ತಿ. ತಿ. ದೇ. ಬೋರ್ಡ್ ಹಾಗೂ ಆಡಳಿತನಿರ್ವಾಹಕ ಮಂಡಳಿ

ಶ್ರೀ ಜಿ ಸಾಂಬಶಿವರಾವ್ ಎಂ. ಎಲ್. ಎ. (ದೆಂದುಲೂರು)
ಸದಸ್ಯರು–ಬೋರ್ಡ್

ಶ್ರೀ ಜಿ. ನಾಗಿರೆಡ್ಡಿ ಎಂ. ಎಲ್. ಎ (ಧರ್ಮವರಂ)
ಸದಸ್ಯರು–ಬೋರ್ಡ್

ಶ್ರೀ ಸಿ. ಆನಂದರಾವ್ ಎಂ. ಎಲ್. ಎ. (ಕರೀಂನಗರ್)
ಸದಸ್ಯರು–ಬೋರ್ಡ್ ಹಾಗೂ ಆಡಳಿತ ನಿರ್ವಾಹಕ ಮಂಡಳಿ

ಶ್ರೀ ಟಿ ಎಲ್. ಎನ್. ಶಾಸ್ತ್ರಿ (ನ್ಯಾಯವಾದಿ)
ಸದಸ್ಯರು–ಬೋರ್ಡ್

ಶ್ರೀ ಡಾ॥ ಎನ್. ದೇವನಾಥನ್. ಪಿ. ಎಚ್‌ಡಿ
ಸದಸ್ಯರು–ಬೋರ್ಡ್

ಶ್ರೀ ಬಿ. ರಾಮಚಂದ್ರರಾಜು
ಸದಸ್ಯರು–ಬೋರ್ಡ್

ಶ್ರೀ ಉಂಡ್ರು ಕೃಷ್ಣರಾವ್ ಎಂ. ಎಲ್. ಎ. (ನಗರಂ)
ಸದಸ್ಯರು–ಬೋರ್ಡ್

ಶ್ರೀಮತಿ ವರದಾ ಸರೋಜ ಎಂ ಎಲ್. ಎ. (ಟೆಕ್ಕಲಿ)
ಸದಸ್ಯರು–ಬೋರ್ಡ್

ಶ್ರೀ ಸಿಂಹಾದ್ರಿ ಸತ್ಯನಾರಾಯಣರಾವ್ ಎ. ಎಲ್. ಎ. (ಅವನಿಗಡ್ಡ)
ಸದಸ್ಯರು–ಬೋರ್ಡ್ ಹಾಗೂ ಆಡಳಿತ ನಿರ್ವಾಹಕ ಮಂಡಳಿ

ಶ್ರೀ ಎಲ್. ವಿ. ರಾಮಯ್ಯ
ಸದಸ್ಯರು–ಬೋರ್ಡ್

ಶ್ರೀ ಎಂ: ಕೆ. ಆರ್. ವಿನಾಯಕ್ ಐ. ಎ. ಎಸ್. ಕಮೀಷನರ್-ಮುಜರಾಯಿಇಲಾಖೆ
ಪದವಿನಿಮಿತ್ತ ಸದಸ್ಯರು–ಬೋರ್ಡ್ ಹಾಗೂ ಆಡಳಿತ ನಿರ್ವಾಹಕ ಮಂಡಳಿ

ಶ್ರೀ ಎಸ್. ಲಕ್ಷ್ಮೀನಾರಾಯಣ. ಕಾರ್ಯನಿರ್ವಾಹಣಾಧಿಕಾರಿ ತಿ. ತಿ. ದೇ.
ಪದವಿ ನಿಮಿತ್ತ ಸದಸ್ಯರು–ಬೋರ್ಡ್ ಹಾಗೂ ಆಡಳಿತ ನಿರ್ವಾಹಕ ಮಂಡಳಿ



ಬ್ರಹ್ಮೋತ್ಸವದಲ್ಲಿ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥಸ್ವಾಮಿಜಿ ಅವರ ಸಂಗೀತಸಭೆ

(4 ನೇ ಪುಟದಿಂದ)

ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಸರ್ಕಾರದ ಪರವಾಗಿ ಸ್ವಾಮಿಗೆ ರೇಷ್ಮೆ ವಸ್ತ್ರಗಳನ್ನು ನೀಡಿದರು. ಮುಖ್ಯಮಂತ್ರಿಗಳನ್ನು ಆಂಜನೇಯಸ್ವಾಮಿ ಗುಡಿಯ ಬಳಿ ವೇದೋಕ್ತವಾಗಿ ಸ್ವಾಗತಿಸಿ ಅವರಿಗೆ ಸ್ವಾಮಿ ಶೇಷವಸ್ತ್ರವನ್ನು ನೀಡಿ ಅವರದನ್ನುಟ್ಟ, ಬಳಿಕ ಅವರನ್ನು ಆಲಯಕ್ಕೆ ಕರೆದೊಯ್ಯಲಾಯಿತು. ಅಲ್ಲಿ ಮುಖ್ಯಮಂತ್ರಿ ಸರ್ಕಾರದ ಪರವಾಗಿ ಸ್ವಾಮಿಗೆ ವಸ್ತ್ರ ಕಾಣಿಕೆ ನೀಡಿದರು.

ಮುಖ್ಯಮಂತ್ರಿ ಎನ್. ಟಿ. ರಾಮರಾವ್ ಅವರು ತಾವೇ ಈ ಹಿಂದೆ ಉದ್ಘಾಟಿಸಿದ್ದ ನಿತ್ಯ ಅನ್ನದಾನಯೋಜನೆಯ ವಿಸ್ತರಣ ಭಾಗವನ್ನೂ ತಿ. ತಿ. ದೇ. ಕ್ಯಾಂಟೀನ್ ಕಾಂಪ್ಲೆಕ್ಸಿನ ಕೆಳಭಾಗದಲ್ಲಿ ಆರಂಭಿಸಿ, ತಾವೇ ಹಲವಾರು ಯಾತ್ರಿಕರಿಗೆ ಬಡಿಸುತ್ತ ನಿಂತರು.

ಶ್ರೀ ವೆಂಕಟೇಶ್ವರಸ್ವಾಮಿಯ ಊಂಜಲ್ ಸೇವೆಯಲ್ಲಿ ಹದಿನೈದು ನಿಮಿಷ ಭಾಗವಹಿಸಿದ

ಬ್ರಹ್ಮೋತ್ಸವದಲ್ಲಿ ಶ್ರೀ ರಾಜಕುಮಾರ ಭಾರತಿ ವೃಂದದವರಿಂದ ಸಂಗೀತಸಭೆ



ನಂತರ ಮುಖ್ಯಮಂತ್ರಿ ಸ್ವಾಮಿದರ್ಶನವನ್ನು ಪಡೆದರು. ಆಂಧ್ರಪ್ರದೇಶದ ವಿದ್ಯಾಶಾಖಾ ಮಂತ್ರಿ ಶ್ರೀ ಗಾಲಿ ಮುದ್ದುಕೃಷ್ಣಮನಾಯುಡು ಕಾರ್ಮಿಕ ಶಾಖಾಮಂತ್ರಿ ಶ್ರೀ ಇಂದ್ರಾರೆಡ್ಡಿ, ದೇವಾದಾಯ ಶಾಖಾಮಂತ್ರಿ ಶ್ರೀ ಯತಿರಾಜಾರಾವ್ ಅವರುಗಳೂ ಈ ಉತ್ಸವದಲ್ಲಿ ಮುಖ್ಯಮಂತ್ರಿಗಳೊಂದಿಗೆ ಪಾಲುಗೊಂಡಿದ್ದರು.

ತಿರುಮಲೆಯ ನಾರಾಯಣಗಿರಿ ಉದ್ಯಾನವನದಲ್ಲಿ ಮುಖ್ಯಮಂತ್ರಿ ಹೊಸದೊಂದು ಸಸ್ಯವನ್ನೂ (ದಬೂಬಿಯಾ ಅಲೆಂಡೆ) ನಾಟಿ, ನೀರು ಹಾಕಿದರು. ಜೊತೆಗೇ ತಿರುಮಲೆಯ ಸಸ್ಯಗಳ ಬಗ್ಗೆ ಒಂದು ಪುಸ್ತಕವನ್ನೂ ಬಿಡುಗಡೆ ಮಾಡಿದರು.

ರಥೋತ್ಸವದ ದಿನವಂತೂ ತಿರುಮಲೆಯಲ್ಲಿ ಅತಿ ಹೆಚ್ಚು ಯಾತ್ರಿಕ ಸಂದೋಹ. ಹಸಿರು ಬೆಟ್ಟದ ಮೇಲೆ ಅರುಣಕಿರಣ ಹರಡುತ್ತಿರುವಂತೆ ಹಲವಾರು ಬಗೆಯ ಆಭರಣಗಳಿಂದಲೂ, ಹೂವಿನ ತೋರಣಗಳಿಂದಲೂ ಅಲಂಕೃತಗೊಂಡ ಶ್ರೀ ವೆಂಕಟೇಶ್ವರಸ್ವಾಮಿಯ ರಥ ಬೆಳಗ್ಗೆ 7 ಗಂಟೆಗೆ ಗೋವಿಂದ ನಾಮಸ್ಮರಣೆಯ ಮಧ್ಯ ತಿರುವೀಧಿಗಳಲ್ಲಿ ಹರಿಯತೊಡಗಿತು. ಭಕ್ತರ ಆನಂದ ಗಾಯನ, ಭಜನೆಗಳ ಮಧ್ಯೆ – ಆಗಸವೆಲ್ಲಂ ಗೋವಿಂದ ನಾಮ ಶಬ್ದಮಯಂ, ಭೂಮಿಯೆಲ್ಲಂ ಗೋವಿಂದ ರಥಮಯಂ, ಹೃದಯವೆಲ್ಲಂ ಗೋವಿಂದ ರೂಪಮಯಂ, ಆಗಿ ಭಕ್ತಿಯ ಸಾಗರವೇ ಗೋವಿಂದನಿವಾಸದ ಸುತ್ತೂ ಪ್ರದಕ್ಷಿಣೆ ಬಂದಂತಿದ್ದಿತು. ಅಂದು ಹಿಂದೆಂದೂ ಇಲ್ಲದಂತಹ ಸರತಿಯ ಸಾಲು ಸ್ವಾಮಿದರ್ಶನಕ್ಕೆ. ವೈಕುಂಠಂ ಕ್ಯೂ ಕಾಂಪ್ಲೆಕ್ಸಿನಲ್ಲಿ 17 ಸಾವಿರ ಮಂದಿ ತುಂಬಿಹೋಗಿ ಹೊರಗಡೆಯಲ್ಲಿ ಸಾಲು ನಡೆದು ಅನ್ನಪೂರ್ಣ ಕ್ಯಾಂಟೀನ್ ಕಡೆಯಿಂದ ಶಂಖುಮಿಟ್ಟದಲ್ಲಿ ಹರಿದಾಡುತಿತ್ತು.

ಅಕ್ಟೋಬರ್ 8 ರಂದು ತಿರುಮಲೆ ತಿರುಪತಿ ದೇವಸ್ಥಾನಗಳ ಹೊಸ ಟ್ರಸ್ಟ್‌ಬೋರ್ಡ್ ಸದಸ್ಯರು ಪ್ರಮಾಣವಚನವನ್ನು ಸ್ವೀಕರಿಸಿದರು. ಹೊಸದಾಗಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷರಾಗಿ ನಾಮಕರಣ ಹೊಂದಿದ ಶ್ರೀ ಡಿ. ಸೀತಾರಾಮಯ್ಯ ಆಂಗ್ಲಭಾಷೆಯಲ್ಲಿ ಸೇವಾ ಪ್ರಮಾಣವಚನವನ್ನು ಸ್ವೀಕರಿಸಿದರು. ಮಿಕ್ಕ ಏಳುಮಂದಿ ಸದಸ್ಯರೂ ತೆಲುಗು ಭಾಷೆಯಲ್ಲಿ ಪ್ರಮಾಣವಚನವನ್ನು ಸ್ವೀಕರಿಸಿದರು. ಮೂವರು ಹಾಜರಿಲ್ಲವಾಗಿ ಅವರು ಅಂದು ಪ್ರಮಾಣವಚನ ಸ್ವೀಕರಿಸಲಿಲ್ಲ. ಅವರುಗಳೆಂದರೆ ಬೋರ್ಡ್ ಸದಸ್ಯರುಗಳಾದ ಶ್ರೀ ಜಿ. ಸಾಂಬಶಿವರಾವು (ಎಂ. ಎಲ್. ಎ. – ದೆಂದುಲೂರು) ಶ್ರೀ ಯು. ಕೃಷ್ಣರಾವ್ (ಎಂ. ಎಲ್. ಎ.–ನಗರಂ) ಶ್ರೀ

ವರದಾ ಸರೋಜ (ಎಂ. ಎಲ್. ಎ-ಟೆಕ್ಕಲಿ) ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಸದಸ್ಯರಿಗೆಲ್ಲ ಪ್ರಮಾಣವಚನವನ್ನು ನೀಡಿದರು. ದೇವಾದಾಯ ಶಾಖಾಮಂತ್ರಿ ಶ್ರೀ ಯತಿರಾಜಾರಾವ್ ಅವರ ಸಮಕ್ಷಮದಲ್ಲಿ ನಡೆದ ಈ ಸಭೆಯಲ್ಲಿ ಮಾಜಿ ಬೋರ್ಡ್ ಸದಸ್ಯರು ಶ್ರೀ ಯಾದಗಿರಿ, ಶ್ರೀ ನಂದಗೋಪಾಲ್, ಶ್ರೀ ನರಸಿಂಗನಾಯಕ್ ಅವರುಗಳು ಹಾಜರಿದ್ದರು. ಕಾರ್ಯಕ್ರಮದ ನಂತರ ರಂಗನಾಯಕ ಮಂಟಪದಲ್ಲಿ ಹೊಸ ಬೋರ್ಡ್ ಸದಸ್ಯರಿಗೆ ವೇದಪಂಡಿತರು ಆಶೀರ್ವಾದ ಮಾಡಿದರು.

ಬ್ರಹ್ಮೋತ್ಸವಗಳ ಸಮಯದಲ್ಲಿ ತಿ. ತಿ. ದೇವಸ್ಥಾನಗಳ ಆದಾಯ ಹಿಂದಿನ ವರ್ಷಕ್ಕಿಂತ ಹೆಚ್ಚಾಗಿದ್ದಿತು. ಅಕ್ಟೋಬರ್ 4 ರಿಂದ 9 ದಿನಗಳ ಕಾಲನಡೆದ ಬ್ರಹ್ಮೋತ್ಸವಗಳಲ್ಲಿ ನಾಲ್ಕು ಲಕ್ಷಕ್ಕೂ ಮೀರಿ–ಜನ ತಿರುಮಲೆಯನ್ನು ಸಂದರ್ಶಿಸಿದರು. ಸ್ವಾಮಿ ಹುಂಡಿಯ ಮೂಲಕ 52 ಲಕ್ಷ ರೂ, ಅರ್ಜಿತಸೇವೆಗಳ ಮೂಲಕ 19 ಲಕ್ಷ ರೂ, ಲಾಡುವಡೆಗಳ ಮಾರಾಟದಿಂದ 24 ಲಕ್ಷ 29 ಸಾವಿರ ರೂಗಳು ಆದಾಯವಾಗಿ ಒಟ್ಟು 95 ಲಕ್ಷ 49 ಸಾವಿರ ರೂಗಳಾಯಿತು. ಹಿಂದಿನ ವರ್ಷ ಬ್ರಹ್ಮೋತ್ಸವದ ಒಟ್ಟು ಆದಾಯ 47 ಲಕ್ಷ ರೂಗಳು ಮಾತ್ರವಾಗಿದ್ದಿತು ಎಂಬುದನ್ನು ಇಲ್ಲಿ ನೆನೆಯಬಹುದು.

## ನೂತನ ಚೀಫ್ ಇಂಜನೀಯರ್

ತಿ. ತಿ. ದೇವಸ್ಥಾನಗಳ ಚೀಫ್ ಇಂಜನಿಯರ್ ಆಗಿ ಶ್ರೀ ಶ್ರೀನಿವಾಸವರ್ಮ ಅವರನ್ನು ಆಂಧ್ರ ಪ್ರದೇಶ ಪ್ರಭುತ್ವ ನೇಮಕಮಾಡಿದೆ. ಈ ಮೊದಲು ಆಂಧ್ರಪ್ರದೇಶದ ರಸ್ತೆ ಹಾಗೂ ಭವನಗಳ ವಿಭಾಗದ ಸೂಪರಿಂಟೆಂಡೆಂಟ್ ಇಂಜನಿಯರ್ ಆಗಿದ್ದ ಶ್ರೀ ವರ್ಮ ಅವರಿಗೆ ಇದು ಮುಂಬಡ್ತಿ ಹಾಗೂ ಬದಲಿ ಉದ್ಯೋಗವಾಗಿದ್ದು, ಶ್ರೀಯುತರು ತಿ. ತಿ. ದೇವಸ್ಥಾನಗಳಲ್ಲಿ ತಮ್ಮ ಪದವಿಯನ್ನು ಸ್ವೀಕಾರ ಮಾಡಿದ್ದಾರೆ.

## ಹೈದರಾಬಾದ್-ತಿರುಪತಿಗಳ ನಡುವೆ ವಾಯುದೂತ್

ದಕ್ಷಿಣ ಭಾರತದಲ್ಲಿ ಮೊದಲಬಾರಿಗೆ ಹೈದರಾಬಾದ್ – ತಿರುಪತಿಗಳ ಮಧ್ಯೆ ಬಹ್ಮೋತ್ಸವ ವಿಶೇಷವಾಗಿ ವಾಯುದೂತ್ ವಿಮಾನ ಸಂಸ್ಥೆ ರಾಕೇಶ್ ಟ್ರಾವೆಲ್ಸ್ ಸಂಸ್ಥೆಯ ಸಹಕಾರದೊಡನೆ ಪ್ಯಾಕೇಜ್ ಟೂರ್ ಅನ್ನು ಏರ್ಪಡಿಸಿದ್ದು ಈ ವಿಮಾನದಲ್ಲಿ 19 ಮಂದಿ ಒಂದು ಬಾರಿ ಪ್ರಯಾಣ ಮಾಡಬಹುದಾಗಿದೆ. ಸೋಮ, ಬುಧ, ಶುಕ್ರವಾರಗಳಲ್ಲಿ ಹೈದರಾಬಾದನ್ನು ಬೆಳಗ್ಗೆ 5.30 ಕ್ಕೆ ಬಿಟ್ಟು 7.50ಕ್ಕೆ ತಿರುಪತಿ ಸೇರಿ ಅದೇ ದಿನಗಳಲ್ಲಿ ಮಧ್ಯಾಹ್ನ 2.15ಕ್ಕೆ ತಿರುಪತಿಯನ್ನು ಬಿಟ್ಟು ಹೈದರಾಬಾದ್ ಸೇರುವ ಅವಕಾಶವಿದೆ.



ಬ್ರಹ್ಮೋತ್ಸವಗಳಲ್ಲಿ ಶ್ರೀ ಡಿ. ಪಶುಪತಿ ಮತ್ತು ವೃಂದವವರಿಂದ ಸಂಗೀತಗೋಷ್ಠಿ

## ಪಾಟ್ನದಲ್ಲಿ ತಿ. ತಿ. ದೇ. ಕಲ್ಯಾಣ ಮಂದಿರ

ಬಿಹಾರದ ರಾಜಧಾನಿ ಪಾಟ್ನದಲ್ಲಿ ತಿ. ತಿ. ದೇವಸ್ಥಾನಗಳ ಕಲ್ಯಾಣಮಂಟಪ ತ್ವರೆಯಲ್ಲಿ ನಿರ್ಮಾಣಗೊಳ್ಳಲಿದೆ. ಪಾಟ್ನದ ಪಶ್ಚಿಮದಲ್ಲಿ ಬಿಹಾರ ಸರ್ಕಾರ ನೀಡಿದ 2.3 ಎಕರೆ ಜಮೀನಿನಲ್ಲಿ ಸುಮಾರು 40 ಲಕ್ಷ ರೂಗಳ ಅಂದಾಜು

ಬ್ರಹ್ಮೋತ್ಸವಗಳಲ್ಲಿನ ಸಂಗೀತ ಸಭೆಯಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ಕಾರ್ಯಕ್ರಮ.



ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. — ಡಿಸೆಂಬರ್ 1986**

**ಗಣಪತಿ-ಹಲವುರೂಪಗಳ ಹಿನ್ನೆಲೆ**
— ಪ್ರೊ॥ ಕೆ. ಟಿ. ಪಾಂಡುರಂಗಿ

**ರುದ್ರಾಭಿಷೇಕ**
— ಕೆ. ಕೇಶವಮೂರ್ತಿ

**ಗುರು ದತ್ತಾತ್ರೇಯ**
— ಸತ್ಯವತಿ ಎಸ್. ನಾರಾಯಣ

**ಅರವಿಂದರು**
— ಸಿ. ಎನ್. ಕೃಷ್ಣಮೂರ್ತಿ

**ಶ್ರೀಕ್ಷೇತ್ರ ಕೈವಾರ**
— ಕವಿತಾ ಕೃಷ್ಣ

**ಸ್ವಾಮಿ ಹರಿದಾಸ**
— ಆದ್ಯ ರಾಮಾಚಾರ್ಯ

**ಜೊತೆಗೆ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಡಿಸೆಂಬರ್ 1986

1. ಸೋಮವಾರ ಕಾರ್ತೀಕ ಸೋಮವಾರಾಭಿಷೇಕ
2. ಮಂಗಳವಾರ ಶ್ರೀ ಪದ್ಮಾವತೀದೇವಿ ಬ್ರಹ್ಮೋತ್ಸವದ ಗಜವಾಹನೋತ್ಸವ
3. ಬುಧವಾರ ಶ್ರೀಪದ್ಮಾವತೀದೇವಿ ಬ್ರಹ್ಮೋತ್ಸವದ ಗರುಡವಾಹನೋತ್ಸವ
5. ಶುಕ್ರವಾರ ಶ್ರೀ ಪದ್ಮಾವತೀದೇವಿ ರಥೋತ್ಸವ
6. ಶನಿವಾರ ಶ್ರೀ ಪದ್ಮಾವತೀದೇವಿ ಬ್ರಹ್ಮೋತ್ಸವ ಅವಭೃತ ಪಂಚಮೀತೀರ್ಥ-ಸ್ಕಂಧಷಷ್ಠಿ
11. ಗುರುವಾರ ಗೀತಾಜಯಂತಿ
14. ಭಾನುವಾರ ದತ್ತಜಯಂತಿ
15. ಸೋಮವಾರ ಕಪಿಲತೀರ್ಥ ಮುಕ್ಕೋಟಿ

ವೆಚ್ಚದಲ್ಲಿ ನಿರ್ಮಾಣ ಆಗಲಿರುವ ಈ ಕಲ್ಯಾಣ ಮಂಟಪದಲ್ಲಿ ಯಾತ್ರಿಕರ ಸೌಲಭ್ಯಕ್ಕಾಗಿ ಒಂದು ವಿಚಾರಣಾಕೇಂದ್ರ ಹಾಗೂ ಗ್ರಂಥಭಂಡಾರ ಇರುವುದೆಂದು ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀ ನಾರಾಯಣ ತಿಳಿಸಿದಾರೆಂದು ವರದಿಯಾಗಿದೆ.

## ತಿರುಮಲೆಯನ್ನು ಸಂದರ್ಶಿಸಿದ ಗಣ್ಯರು

ಆರ್ಮಿ ಲೆಫ್ಟಿನೆಂಟ್ ಜನರಲ್: ಭಾರತೀಯ ಸೇನೆಯ ಲೆಫ್ಟಿನೆಂಟ್ ಜನರಲ್ ಶ್ರೀ ಕೆ. ವಿ. ಮೆಹತಾ ಅವರು ಸೆಪ್ಟೆಂಬರ್ 22 ರಂದು ಸೋಮವಾರ ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿದರ್ಶನವನ್ನು ಮಾಡಿದರು. ದೇವಾಲಯದ ಬಳಿ ಶ್ರೀ ಕೆ. ವಿ. ಮೆಹತಾ ಅವರನ್ನು ಆಲಯ ಮರ್ಯಾದೆಗಳಂತೆ ಬರಮಾಡಿಕೊಳ್ಳಲಾಯಿತು. ದೇವರ ದರ್ಶನ ಆರಾಧನೆಗಳ ನಂತರ ಶ್ರೀಯುತರು ತಿರುಮಲೆಯ ಪಾಪನಾಶಿನಿ ಮತ್ತಿತರ ಸ್ಥಳಗಳನ್ನೂ ಸಂದರ್ಶಿಸಿದರು.

ನ್ಯಾಯಾಧೀಶರು: ಆಂಧ್ರಪ್ರದೇಶದ ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಶ್ರೀ ರಘುವೀರ್, ಶ್ರೀ ಶ್ರೀರಾಮುಲು ಅವರುಗಳೂ ತಮಿಳ್ನಾಡು ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ವೆಂಕಟಸ್ವಾಮಿ ಅವರೂ ಸೆಪ್ಟೆಂಬರ್ 28 ರ ಭಾನುವಾರ ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿದರು. ಇವರಿಗೆ ತಿ. ತಿ. ದೇವಾಲಯಗಳ ಪರವಾಗಿ ಜೆ. ಇ. ಓ. ಹಾಗೂ ಪೇಷ್ಕಾರ್ ಪೀರಯ್ಯ ಅವರುಗಳು ಸ್ವಾಗತವನ್ನು ನುಡಿದರು.

ತಮಿಳುನಾಡು ಮಂತ್ರಿ ಶ್ರೀ ರಾಜಾರಾಮ್ ಅವರೂ ಕುಟುಂಬಸಹಿತರಾಗಿ ತಿರುಮಲೆಯಲ್ಲಿ ಸ್ವಾಮಿ ಸುಪ್ರಭಾತ ಸೇವೆಯಲ್ಲಿ ಒಂದು ಭಾಗ ವಹಿಸಿದ್ದರು.

ಕರ್ನಾಟಕದ ರಾಜ್ಯಪಾಲರು:— ಕರ್ನಾಟಕದ ರಾಜ್ಯಪಾಲ ಶ್ರೀ ಅಶೋಕನಾಥ ಬ್ಯಾನರ್ಜಿ ಅವರು ತಮ್ಮ ಕುಟುಂಬದೊಂದಿಗೆ ತಿರುಮಲೆಗೆ ಆಗಮಿಸಿ ಶುಕ್ರವಾರದ ಅಭಿಷೇಕ ಸೇವೆಯಲ್ಲಿ ಪಾಲುಗೊಂಡು ಸ್ವಾಮಿಯನ್ನು ಆರಾಧಿಸಿದರು. ಅವರು ಬುಧವಾರವೇ ತಿರುಮಲೆಗೆ ಆಗಮಿಸಿದ್ದರು. ಅವರನ್ನು ದೇವಾಲಯ ಮರ್ಯಾದೆಗಳೊಂದಿಗೆ ಸ್ವಾಗತಿಸಲಾಯಿತು

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D Press, Tirupati - 517501.

